# ೧

## ಚಿಕ್ಕೆಗಳ ಕಡಲು

ನಿರ್ಮಲವಾದ ಆಕಾಶ. ನೀಲಿ ಮಕಮಲ್ ಬಟ್ಟೆಯ ಮೇಲೆ ತಾರಿ ಚಿಕ್ಕೆಗಳಹಾಗೆ ಕೋಟ್ಯಾನುಕೋಟಿ ನಕ್ಷತ್ರಗಳು!

'ಸ್ವಾಮಿ, ಒಂದು ಮಾತು ಕೇಳಲಿ?' ಎಂದ ನಮ್ಮ ತಿಮ್ಮಯ್ಯ.

ತಿಮ್ಮಯ್ಯ ನಮ್ಮ ರೈತ. ಅರವತ್ತರ ಮನೆ ದಾಟಿದ ಪೂರ್ವಕಾಲದ ನುಷ್ಯ. ಆ ಹರವು ನಿಡುವು, ಬಿಳಿಯ ರೇಶಿಮೆಯಂಥ ಆ ಕೂದಲು, ಎಣ್ಣೆಗೆಂಪು ಹಣೆಯ ಮೇಲೆ ಅತಿ ಶ್ರದ್ಧೆಯಿಂದ ತೀಡಿದ ತಿಲಕ, ಕೈಗೆ ಳ್ಳಿಯ ಕಡಗ, ತಲೆತುಂಬ ಶಠಗೋಪದಂಥ ರುಮಾಲು — ತಿಮ್ಮಯ್ಯನ ೂರ್ತಿ ನನ್ನ ಕಣ್ಣಿಗೆ ಕಟ್ಟಿದಂತಿದೆ. ತಿಮ್ಮಯ್ಯ ತಾತನ ಕಾಲದವನು. ತ ಎಂದೇ ಆತನನ್ನು ಕರೆಯುತ್ತಿದ್ದೆ. ಅಪ್ಪ ಆತನ ಕೈಯ್ಯಲ್ಲಿ ಬೆಳೆದು ಷ್ಟವರಾಗಿ ಹೊರಟು ಹೋದರು. ಬಿಳುಪು ತಿರುಗುತ್ತಿದ್ದ ಆತನ ಮಧ್ಯ ಯುಸ್ಸಿನ ಮೀಸೆ ನೋಡುತ್ತ ನಾನು ಆತನ ಮಡಿಲಲ್ಲಿ ಬೆಳೆದೆ.

ಒಂದು ಕೈಯಲ್ಲಿ ಆ ಬಿಳಿಯ ಮೀಸೆ ಹುರಿಮಾಡುತ್ತ ಎರಡನೆ ಯಿಂದ ಕಡ್ಡಿಪುಡಿಗಾಗಿ ಜೇಬಿನಲ್ಲಿ ತಡಕಾಡುತ್ತ ತಿಮ್ಮಯ್ಯ ಕೇಳಿದ:

'ಸ್ವಾಮಿ, ಒಂದು ಮಾತು ಕೇಳಲಿ?' ಎಂತ.

'ಅದೇನು ತಾತ' ಎಂದೆ. ಆಗತಾನೆ ಊಟವಾಗಿತ್ತು. ಮುಂದಿನ ಡಸಾಲೆಯಲ್ಲಿ ವಿರಾಮ ಕುರ್ಚಿಯಲ್ಲಿ ಬಿದ್ದುಕೊಂಡಿದ್ದೆ.

'ಏನೂ ಇಲ್ಲ. ಬಹಳ ದಿನದಿಂದ ಮನಸ್ಸಿಗೆ ಅನುಮಾನ. ಈ ಿಕ್ಕೆಗಳು ಬಹಳ ಚಿತ್ರವಿಚಿತ್ರವಾಗಿವೆ. ಕೆಲವು ದೀಪದ ಹಾಗೆ, ದೂರದಲ್ಲಿ ಳಕಿನ ಮುದ್ದೆಯ ಹಾಗೆ ಕಾಣುತ್ತವೆ. ಎಲೆಕ್ಟ್ರಿ ದೀಪದ ಹಾಗೆ ತಳುಕ್, ಳುಕ್ ಅನ್ನುತ್ತವೆ. ಏನು ಕಾರಣವೋ?'

ಪ್ರಕೃತಿಯ ಪರಮ ರಹಸ್ಯಗಳಲ್ಲಿ ಒಂದು ಈ ಮುದಿ ಮೆದುಳನ್ನು ಕಲಕುತ್ತಿದೆ.

'ಮಿಣುಕ್ ಮಿಣುಕ್ ಎಂಬವು ನಕ್ಷತ್ರಗಳು. ಮುತ್ತಾಪುಗಳ ಹಾಗೆ ಬೆಳಗುತ್ತಿರುವುವು ಗ್ರಹಗಳು. ನಮಗೆ ಕಾಣಿಸುತ್ತಿರುವ ಆ ಕೆಂಪು ಕುಂಕುಮದುಂಡೆ ಅಂಗಾರಕ.'

'ಗ್ರಹಗಳೆಂದರೆ — ಹಿಡಿದರೆ ಏಳು ವರುಷದ ತನಕ ಗೋಳಾಡಿಸುತ್ತವೆಯಂತಲ್ಲ, ಆ ಶನಿ ಗ್ರಹದಂಥಾವೇನು?'

'ಅಂಥಾವೇ.'

'ಇವು ಹೀಗೆ ಏಕೆ ಇವೆ, ದೇವರು?'

'ನಕ್ಷತ್ರಗಳ ಬೆಳಕು ಸಹಜಕಾಂತಿ. ಆ ಕಾಂತಿ ಅವುಗಳಲ್ಲೇ ಸ್ವತಃ ಇದೆ. ಹಲವು ಕೋಟಿ ಮೈಲಿ ದೂರದಲ್ಲಿದ್ದರೂ ಅವುಗಳ ಬೆಳಕು ನಮ್ಮ ಕಣ್ಣಿಗೆ ಹೆಚ್ಚುತ್ತಾ ತಗ್ಗುತ್ತಾ ಮಿಣುಕ್ ಮಿಣುಕ್ ಎಂತ ಕಾಣಿಸುತ್ತದೆ. ಗ್ರಹಗಳ ಬೆಳಕು ಅವುಗಳಲ್ಲಿ ಹುಟ್ಟಿದ್ದಲ್ಲ: ಎರವು ತಂದದ್ದು. ಸೂರ್ಯನಿಂದ ತಂದುಕೊಂಡದ್ದು. ಒಂದೊಂದು ಗ್ರಹ ಒಂದೊಂದು ಕನ್ನಡಿ ಚೂರು. ಸೂರ್ಯಕಾಂತಿ ಈ ಕನ್ನಡಿಗಳ ಮೇಲೆ ಬಿದ್ದು ಪ್ರತಿಬಿಂಬಿಸುತ್ತಿದೆ. ಅದರಿಂದ ಇವು ಹೀಗೆ ಥಳಥಳ ಪಂಜಿನಂತೆ ಮೆರೆಯುತ್ತಿವೆ. ಅಷ್ಟೇ ಅಲ್ಲ, ಚಿಕ್ಕೆಗಳಿಗಿಂತ ಈ ಗ್ರಹಗಳು ನಮಗೆ ತೀರಾ ಸಮೀಪವಾಗಿವೆ.'

ತಿಮ್ಮಯ್ಯ ಎಲೆ ಅಡಿಕೆ ಅಗಿಯುತ್ತ —

'ಸುಲಿದ ಬಾಳೆಯ ಹಣ್ಣಿನ ಹಾಗೆ ಎಲ್ಲವನ್ನೂ ಬಿಡಿಸಿ ಹೇಳಿದಿರಿ. ಎಷ್ಟಾದರೂ ಓದಿದವರು! ಅದಿರಲಿ, ಈ ಗ್ರಹಗಳು ಚಿಕ್ಕೆಗಳಿಗಿಂತ ದೊಡ್ಡವಲ್ಲವೆ? ಅವೂ ಇವೂ ಕಣಜದಲ್ಲಿನ ಕಾಳಿನ ಹಾಗೆ ಹತ್ತಿರ ಹತ್ತಿರ ಏಕೆ ಇರುವುದಿಲ್ಲ?'

'ಹತ್ತಿರವೆಲ್ಲಿ ಬಂತು? ಒಂದೊಂದು ನಕ್ಷತ್ರಕ್ಕೂ ಒಂದೊಂದು ಗ್ರಹಕ್ಕೂ ಕೋಟ್ಯಾನುಕೋಟಿ ಮೈಲಿ ದೂರವಿದೆ, ತಾತ. ಇಷ್ಟು ದೂರ ಇರುವುದರಿಂದ ಹಾಗೆ ಕಲೆತು ಇದ್ದಂತೆ ಕಾಣುತ್ತಿವೆ.'

'ಇಷ್ಟು ದೂರ ಎಂದಿರಿ. ಎಷ್ಟೋ?'

'ನಮ್ಮ ಮೈಲಿಗಳ ಲೆಕ್ಕದಲ್ಲಿ ಹೇಳಲು ಸಾಧ್ಯವಿಲ್ಲ, ತಾತ.

ಶಾಸ್ತ್ರಜ್ಞರು ಒಂದು ಪದ್ಧತಿ ಏರ್ಪಡಿಸಿದಾರೆ. ನಕ್ಷತ್ರಗಳ ಕಾಂತಿಯಾಗಲಿ ಗ್ರಹಗಳ ಕಾಂತಿಯಾಗಲಿ ನಮ್ಮ ಭೂಮಿಯ ಮೇಲೆ ಬಂದು ಬೀಳಲು ಎಷ್ಟು ಕಾಲ ಹಿಡಿಯುತ್ತದೆಯೋ ಕಂಡು ಹಿಡಿದಿದಾರೆ. ಇದನ್ನು ಒಂದು ಕಾಂತಿ ವರ್ಷ ಎನ್ನುತ್ತಾರೆ.

ಈ ಲೆಕ್ಕದ ಪ್ರಕಾರ ನಮ್ಮ ಭೂಗೋಳಕ್ಕೆ ಅತಿ ಸಮಿಾಪದಲ್ಲಿರುವ ನಕ್ಷತ್ರದಿಂದ ಹೊರಟ ಕಾಂತಿ ನಮ್ಮ ಬಳಿಗೆ ಬರಲು ನಾಲ್ಕು ವರ್ಷ ನಾಲ್ಕು ತಿಂಗಳು ಆಗುತ್ತದೆ. ಎಂದರೆ ಆ ನಕ್ಷತ್ರಕ್ಕೂ ಭೂಮಿಗೂ ನಡುವೆ ಇರುವ ದೂರ ೪ ೧/೩ ಕಾಂತಿ ವರ್ಷಗಳು.'

'ಎಂದರೆ ಇದು ಶಾಸ್ತ್ರಜ್ಞರ ಗಜಕಡ್ಡಿಯೆ, ಮೇಷ್ಟ್ರೆ?'

ಕೇಳಿದವನು ಸುಬ್ಬ. ಮಹಡಿಯ ಮೇಲೆ ತನ್ನ ಪಾಠ ಓದಿಕೊಳ್ಳುತ್ತಿದ್ದವನು ಯಾವಾಗಲೋ ಇಳಿದು ಬಂದಿದಾನೆ.

'ಹೌದು ಸುಬ್ಬ. ಖಗೋಳ ದೂರಗಳನ್ನು ಅಳೆಯಲು ಕಾಂತಿ ವರ್ಷದ ಅಳತೆಗೋಲು ಬಹಳ ಅನುಕೂಲ. ಮಾದರಿಗೆ ಒಂದು ಸಂಗತಿ ಹೇಳುತ್ತೇನೆ, ಕೇಳು – ಸೂರ್ಯ ನಮ್ಮ ಭೂಮಿಗೆ ೯ ಕೋಟಿ ೩೦ ಲಕ್ಷ ಮೈಲಿ ದೂರದಲ್ಲಿದಾನೆ.'

'ಅಬ್ಬ, ಅಷ್ಟು ದೂರವೆ' ಎಂದ ತಿಮ್ಮಯ್ಯ ತಂಬುಲರಸ ಉಗುಳುತ್ತ.

'ಇಷ್ಟಕ್ಕೇ ಅಂಜಿದೆಯಲ್ಲ. ನಮ್ಮ ಭೂಮಿಗೆ ಅತಿ ಸಮಿಾಪದಲ್ಲಿರುವ ನಕ್ಷತ್ರದ ದೂರವನ್ನು ಮೈಲಿ ಲೆಕ್ಕದಲ್ಲಿ ಹೇಳಬೇಕೆಂದರೆ — ಸೂರ್ಯನ ಈ ೯ ಕೋಟಿ ೩೦ ಲಕ್ಷ ದೂರವನ್ನು ೭೦ ಸಾವಿರದಿಂದ ಗುಣಿಸಬೇಕು. ಇದಕ್ಕಿಂತ ೪ ೧/೩ ಕಾಂತಿವರ್ಷ ಎಂಬುದು ಸುಲಭವಲ್ಲವೆ?'

'ಮೇಷ್ಟ್ರೆ, ಗ್ರಹಗಳಿಗಿಂತ ನಕ್ಷತ್ರಗಳೇ ದೊಡ್ಡವಂತೆ ಹೌದೆ?'

'ನಿಜ. ಈ ಬ್ರಹ್ಮಾಂಡದಲ್ಲಿ ಗ್ರಹಗಳಿಗಿಂತ ನಕ್ಷತ್ರಗಳೇ ಮೊದಲು ಹುಟ್ಟಿದವು. ಗ್ರಹಗಳು ಹುಟ್ಟಿದ್ದೇ ನಕ್ಷತ್ರಗಳೊಳಗಿಂದ.'

ತಿಮ್ಮಯ್ಯ ಅಂಗಾರಕನ ಕಡೆ ತೀಕ್ಷ್ಣವಾಗಿ ನೋಡುತ್ತಿದಾನೆ.

'ಬಹಳ ತಮಾಷೆಯಾಗೇ ಇದೆ ಈ ಸಂಗತಿ. ಹಾಗಾದರೆ ಈ ಅಂಗಾರಕನೂ ಅಗೊ, ಆ ಪಕ್ಕದ ಚಿಕ್ಕೆಯೊಳಗಿಂದ ಹುಟ್ಟಿ ಬಂದನೆ?'

'ಇಲ್ಲ ಇಲ್ಲ. ಆ ಚಿಕ್ಕೆ ಅಂಗಾರಕನಿಗೆ ಹಲವು ಕೋಟಿ ಮೈಲಿ ದೂರದಲ್ಲಿದೆ. ಹೇಳಲಿಲ್ಲವೆ – ನಾವು ಬಹಳ ದೂರವಾಗಿ ಇರುವುದರಿಂದ ಈ ಚಿಕ್ಕೆಗಳು ಹಾಗೆ ಹತ್ತಿರವಿದ್ದಂತೆ ಭ್ರಾಂತಿಗೊಳ್ಳುತ್ತೇವೆ. ಆ ನಕ್ಷತ್ರಕ್ಕೂ ಅಂಗಾರಕನಿಗೂ ಯಾವ ಸಂಬಂಧವೂ ಇಲ್ಲ, ತಾತ. ಅಂಗಾರಕ ಸೂರ್ಯನೊಳಗಿಂದ ಹುಟ್ಟಿದ.'

ಆತನ ಮುದಿ ಮೋರೆಯಲ್ಲಿ ಅಚ್ಚರಿ ಒಡಮೂಡಿತು.

'ಅದು ಹೇಗೆ? ನಮ್ಮ ಸಿದ್ಧಾಂತಿಗಳು ಸೂರ್ಯನನ್ನು ಗ್ರಹರಾಜ ಎನ್ನುತ್ತಾರೆ. ನೀವೇನೊ ಗ್ರಹಗಳು ನಕ್ಷತ್ರಗಳೊಳಗಿಂದ ಹುಟ್ಟಿವೆ ಎನ್ನುತ್ತೀರಿ. ನಿಮ್ಮ ಶಾಸ್ತ್ರದ ಪ್ರಕಾರ, ಸೂರ್ಯ ಅಂಗಾರಕನಿಗೆ ತಂದೆಯಾದರೆ, ಸೂರ್ಯ ಗ್ರಹ ಹೇಗೆ ಆಗುತ್ತಾನೆ? ನಕ್ಷತ್ರ ಆಗಬೇಡವೆ?'

ಪುರಾಣ ಶ್ರವಣ ಮಾಡಿದ ಈ ಮುದಿ ಮೆದುಳಿಗೆ ಎಷ್ಟು ತರ್ಕ! ಆಶ್ಚರ್ಯ! ಈಗಿನ ವಿದ್ಯಾರ್ಥಿಗಳಲ್ಲಿ ಎಷ್ಟು ಜನಕ್ಕೆ ಇದೆ ಈ ಜಿಜ್ಞಾಸೆ?

'ತಾತ, ನಿಜವಾಗಿ ಸೂರ್ಯ ದೊಡ್ಡ ನಕ್ಷತ್ರವೇ. ಈ ನಕ್ಷತ್ರದಿಂದಲೇ ಈ ಅಂಗಾರಕ, ಉಳಿದ ಗ್ರಹಗಳು, ಎಲ್ಲವೂ ಹುಟ್ಟಿದ್ದು.'

ಬಲ ಅಂಗೈಯಲ್ಲಿ ಗಲ್ಲವನ್ನೂರಿ ಮುಗಿಲ ಕಡೆ ನೋಡುತ್ತ ಎಂದ– 'ಇಳಿದಂತೆಲ್ಲ ಆಳ. ಈ ಚಿಕ್ಕೆಗಳ ಪುರಾಣವೂ ಹಾಗೇ ಇದೆ. ಈ ಚಿಕ್ಕೆಗಳು ಹೀಗೆ ಕೋಟಿಗಟ್ಟಲೆ ಮೈಲಿ ದೂರದಲ್ಲಿ– ಕೋಟಿ ಮೈಲಿಗಳೇನು ಬಂತು, ಇವುಗಳ ಲೆಕ್ಕವೇ ಬೇರೆ – ಮಿಣುಕ್ ಮಿಣುಕ್ ಎನ್ನುತ್ತ ಮಿಣುಕುಹುಳುಗಳಂತೆ ಇವೆಯೆ? ಈ ದೊಡ್ಡ ನಕ್ಷತ್ರ – ನಮ್ಮ ಸೂರ್ಯನೇ ಅಲ್ಲವೆ ದೊಡ್ಡವನು – ಹೀಗೆ ಕೆಂಡ ಉಗುಳುತ್ತಿದಾನೆಯೆ?....'

'ತಾತ, ಸೂರ್ಯ ಮೂರನೆ ತರಗತಿ ನಕ್ಷತ್ರ. ಸೂರ್ಯನಿಗಿಂತ ಹತ್ತು ಹದಿನೈದು ಪಟ್ಟು ದೊಡ್ಡ ನಕ್ಷತ್ರಗಳಿವೆ. ಚಿತ್ತ, ರೋಹಿಣಿ, ಆರ್ದ್ರ ನಕ್ಷತ್ರಗಳು ಸೂರ್ಯನಿಗಿಂತ ದೊಡ್ಡವು. ಅಗಸ್ತ್ಯ ನಕ್ಷತ್ರ ಸೂರ್ಯನಿಗಿಂತ ೮೦ ಸಾವಿರ ಪಾಲು ಹೆಚ್ಚು ಕಾಂತಿ ಬೀರುತ್ತಿದೆ.'

ಆ ಮುದಿಕಣ್ಣು ಅನುಮಾನದಿಂದ ಸ್ವಲ್ಪ ಮುಚ್ಚಿಕೊಂಡು ಒಡನೆಯೆ ಕೆಂಡದಂತಾದವು.

‘ನಾನೇನು ಹುಚ್ಚುಮುಂಡೆಯೆಂದು ತಿಳಿದಿದೀರೋ ನೀವು? ಸೂರ್ಯನಿಗಿಂತ ಇಷ್ಟು ದೊಡ್ಡವಾದರೆ ಇವು ದೊಡ್ಡವಾಗಿ ಕಾಣುವುದಿಲ್ಲೇಕೆ?’

‘ನಮ್ಮ ಈ ಬರಿಗಣ್ಣಿಗೆ ಕಾಣವು ತಾತ. ಶಾಸ್ತ್ರಜ್ಞರು ಒಂದು ಉಪಕರಣವನ್ನು ನಿರ್ಮಿಸಿ ಖಗೋಳ ಗೋಳಗಳ ಸಂಗತಿಯನ್ನು ಕಂಡು ಹಿಡಿದಿದಾರೆ.’

‘ಅದು ಹೇಗಿದೆ?’

‘ಹಾಗೆ ಕೇಳು. ಎಂದಾದರೂ ಭೂತಗನ್ನಡಿ ನೋಡಿದೀಯಾ?’

‘ನೋಡದೆ ಏನು! ಅಗೊ, ಆ ಅಕ್ಕಸಾಲಿಗನ ಹತ್ತಿರ ಇದೆ. ಅದರೊಳಗೆ ಕಣ್ಣಿಟ್ಟು ನೋಡಿದರೆ ರಾಗಿಕಾಳು ಅವರೆಕಾಳಿನಂತೆ ಕಾಣುತ್ತದೆ.’

‘ಸರಿ. ಹುಣಿಸೆಬೀಜವನ್ನು ಹಿಮಾಲಯದಷ್ಟು ದೊಡ್ಡದಾಗಿ ತೋರಿಸುವ ಭೂತಗನ್ನಡಿಗಳಿವೆ. ಅವನ್ನು ಉದ್ದವಾದ ಕೊಳವೆಗಳಿಗೆ ಜೋಡಿಸುತ್ತಾರೆ. ಜೋಡಿಸಿ, ಸಾವಿರಾರು ಅಡಿ ಎತ್ತರವಾದ ಗುಡ್ಡಗಳ ಶಿಖರಗಳ ಮೇಲೆ ಇಡುತ್ತಾರೆ.

ಆ ಯಂತ್ರಕ್ಕೆ **ದೂರದರ್ಶಕ** ಎಂದು ಹೆಸರು. ಈ ಯಂತ್ರದ ಮೂಲಕ ನಕ್ಷತ್ರಗಳನ್ನು ಗ್ರಹಗಳನ್ನು ಯಾವಾಗಲೂ ಕಂಡುಹಿಡಿಯುತ್ತಿರುತ್ತಾರೆ. ಇದರ ಸಹಾಯದಿಂದಲೂ ಗಣಿತದಿಂದಲೂ ಸೂರ್ಯ ಬಹಳ ಚಿಕ್ಕ ನಕ್ಷತ್ರ, ಮೂರನೆ ತರಗತಿ ನಕ್ಷತ್ರ ಎಂದು ತಿಳಿದುಕೊಂಡರು.’

ಮುದುಕ ಬಹಳ ಗಮನಕೊಟ್ಟು ಕೇಳುತ್ತಿದ್ದ. ‘ಬಿಳಿಯವನೂ ಮಹಿರಾವಣನ ಕುಲದವನೇ! ಎಲ್ಲವೂ ಯಕ್ಷಿಣೀ ಕೆಲಸವೆ.’

‘ತಾತ, ಒಂದಾನೊಂದು ಕಾಲದಲ್ಲಿ ನಮ್ಮ ದೇಶದಲ್ಲೂ ಈ ಖಗೋಳಶಾಸ್ತ್ರ ಬಹಳ ಉನ್ನತ ಸ್ಥಿತಿಯಲ್ಲಿತ್ತು. ಅಲ್ಲವೆ ಮೇಷ್ಟ್ರೆ?’

‘ಹೌದು ಸುಬ್ಬ. ಕೆಲ ಕೆಲವು ನಕ್ಷತ್ರ ಖಗೋಳದಲ್ಲಿ ಕೆಲ ಕೆಲವು ಸ್ಥಾನಗಳಲ್ಲಿದ್ದಾಗಲೇ ಕೆಲವು ಯಜ್ಞ ಯಾಗಾದಿಗಳನ್ನು ಮಾಡಬೇಕು: ಮೃಗಶಿರಾ ನಕ್ಷತ್ರಕ್ಕೆ ನಮ್ಮವರು ಈ ರೀತಿಯಾಗಿ ಬಹಳ ಪ್ರಾಧಾನ್ಯ ಕೊಟ್ಟರು. ಪ್ರಾಚೀನಾರ್ಯರಿಗೆ ನವಗ್ರಹಗಳ ವಿಷಯ ಗೊತ್ತು. **ಬ್ರಹ್ಮಾಂಡ** ಎಂಬ ಪದ ಬಳಸಿದಾರೆ. ದೊಡ್ಡ ಮೊಟ್ಟೆ ಎಂದು ಅರ್ಥ. ಇಂದಿನ ಶಾಸ್ತ್ರಜ್ಞರೂ ಈ ಬ್ರಹ್ಮಾಂಡ ಗುಂಡಗೆ ಮೊಟ್ಟೆಯಾಕಾರವಾಗಿದೆ ಎನ್ನುತ್ತಿದಾರೆ.’

'ನಮ್ಮ ಋಷಿಗಳು ಇವನ್ನೆಲ್ಲ ತಿಳಿಗಣ್ಣಿಂದ ನೋಡಿಯೇ ಇದ್ದ ರಲ್ಲವೆ?'

'ನಮ್ಮ ಪೂರ್ವಿಕರ ಶಾಸ್ತ್ರಜ್ಞಾನ ಎಷ್ಟಿತ್ತೋ ನಮಗೆ ಇನ್ನೂ ತಿಳಿದಿಲ್ಲ, ತಾತ. ಕೆಲವು ಗ್ರಂಥ ನಮ್ಮ ದೇಶವನ್ನು ದಾಟಿಹೋಗಿವೆ. ಬೌದ್ಧರಿಗೂ ಬ್ರಾಹ್ಮಣರಿಗೂ ನಡೆದ ಜಗಳದಲ್ಲಿ ಯುದ್ಧಗಳಲ್ಲಿ ಎಷ್ಟೋ ಅಮೂಲ್ಯ ವಿಷಯ ಮುಳುಗಿಹೋಯಿತು. ನಮಗೆ ತಿಳಿದಿರುವ ಮಟ್ಟಿಗೆ ಅವರ ಬ್ರಹ್ಮಾಂಡಜ್ಞಾನಕ್ಕೂ ಇವೂತ್ತಿನ ಶಾಸ್ತ್ರ ವಿಷಯಗಳಿಗೂ ಸ್ವಲ್ಪ ಭೇದವಿದೆ. ಆದ್ದರಿಂದ ಆ ಕಾಲದಲ್ಲಿ ಬ್ರಹ್ಮಾಂಡವೇ ಬೇರೆಯಾಗಿತ್ತೇನೋ ಅನಿಸುತ್ತಿದೆ.

ಆದರೂ ಜ್ಯೋತಿಷದಲ್ಲಿ ನಮ್ಮ ಸಿದ್ಧಾಂತಿಗಳದೇ ಇನ್ನೂ ಮೇಲುಗೈ. ತಲೆತಲಾಂತರವಾಗಿ ಬರುತ್ತಿರುವ ನಮ್ಮ ಪಂಚಾಂಗಗಳೇ ಇದಕ್ಕೆ ಉದಾಹರಣೆ.

ನಮ್ಮವರಿಗೂ ಪಾಶ್ಚಾತ್ಯರಿಗೂ ಮೂಲತಃ ಒಂದು ಭೇದವಿದೆ. ಈ ಶಾಸ್ತ್ರಜ್ಞರು ಯಂತ್ರಗಳ ಮೂಲಕ ಖಗೋಳಗೋಳಗಳನ್ನು ಅವುಗಳಲ್ಲಿರುವ ಪದಾರ್ಥವನ್ನು ತಿಳಿದುಕೊಂಡಿದಾರೆ.'

'ಅದೇ ಅದೇ, ಎಲ್ಲವೂ ಆ ಯಂತ್ರದ ಗುಂಡಿಗಳಲ್ಲಿದೆ. ಇರಲಿ – ಈ ಚಿಕ್ಕೆಗಳ ಹುಟ್ಟಿನ ಸಂಗತಿಯನ್ನು ಕಂಡು ಹಿಡಿದಿದಾರೆಯೆ? ಗ್ರಹಗಳಿಗಿಂತ ಇವೇ ಮೊದಲು ಎಂದಿರಲ್ಲ?'

'ಹೂಂ. ಒಂದು ಸಿದ್ಧಾಂತ ಮಾಡಿದಾರೆ ತಾತ. ದೂರವಾಗಿ ಆಕಾಶದಲ್ಲಿ ಅರಳೆ ಹಂಜಿಯಂತೆ ಕಾಣುತ್ತಿಲ್ಲವೆ? ನೋಡು.'

'ಹೂಂ. ಕಾಣಿಸುತ್ತದೆ. ಆ ಚಿಕ್ಕೆಗಳ ಗುಂಪಿನಲ್ಲಿ ಇರುವುದೇ ತಾನೆ?'

'ಹೌದು. ಆ ಚಿಕ್ಕೆಗಳ ಗುಂಪಿಗೆ **ದೇವಯಾನಿ** ಎಂದು ಹೆಸರು. ಆ ಅರಳೆಹಂಜಿಯನ್ನು **ಕಾಂತಿಮೇಘ** ಎನ್ನುತ್ತಾರೆ.'



ದೇವಯಾನಿ – ಕಾಂತಿಮೇಘ

'ಅಷ್ಟು ಕಾಂತಿವಂತವಾಗಿ ಇದೆ ಎಂತಲೆ?'

ಚಿಕ್ಕಂದಿನಿಂದ ಪುರಾಣಗಳನ್ನು ಕೇಳಿ ಇಷ್ಟು ಸಂಸ್ಕಾರ ಲಭಿಸಿದೆ ಈ ಮುದುಕನಿಗೆ. ಒಳ್ಳೆಯ ಅರ್ಥಜ್ಞಾನ ಬಂದಿದೆ.

'ಹೌದು ತಾತ. ಅದೇ ಅರ್ಥ. ಆದರೆ ದೂರದರ್ಶಕದಿಂದ ನೋಡಿದರೆ ಈ ಕಾಂತಿಮೇಘ ಹೀಗೆ ಬೆಳ್ಳಗೆ ಅರಳಿಹಂಜಿಯ ಹಾಗೆ ಇಲ್ಲ.'

'ಹಾಗಾದರೆ?'

'ಸಿಂಬಿ ಸುತ್ತಿಕೊಂಡ ಹಾವಿನಹಾಗೆ ಇದೆ, ಸುಬ್ಬ. ಈ ಸಿಂಬಿಯಲ್ಲಿ ನಡುನಡುವೆ ಚಿಕ್ಕೆಗಳಿವೆ. ಇವು ಈ ಕಾಂತಿಮೇಘದೊಳಗಿಂದಲೇ ಹುಟ್ಟಿದವೆಂದು ಶಾಸ್ತ್ರಜ್ಞರ ಸಿದ್ಧಾಂತ. ಹೀಗೆ ಆದಿಯಲ್ಲಿ, ಈ ಖಗೋಳವೆಲ್ಲ ಶೂನ್ಯವಾಗಿದ್ದಾಗ ಒಂದೇ ಒಂದು ಕಾಂತಿಮೇಘ ಇದ್ದಿರಬೇಕು. ಈ ಕಾಂತಿಮೇಘದಿಂದ ಇವೊತ್ತೂ ಈ ಚಿಕ್ಕೆಗಳು ಹುಟ್ಟುತ್ತಿರುವಂತೆ ಆಗ ಅದರೊಳಗಿಂದ ಈ ನಕ್ಷತ್ರಗಳೆಲ್ಲ—ಈಗ ನಮಗೆ ಕಾಣಿಸುತ್ತಿರುವವು—ಕ್ರಮಕ್ರಮವಾಗಿ ಹುಟ್ಟಿರಬೇಕು. ಹೀಗೆ ಹುಟ್ಟಿದವುಗಳಲ್ಲಿ, ಚಿಕ್ಕ ಚಿಕ್ಕೆಗಳಲ್ಲಿ ನಮ್ಮ ಸೂರ್ಯ ಒಬ್ಬ. ಈತನಿಂದ ಈ ಗ್ರಹಗಳು ಹುಟ್ಟಿರಬೇಕು.... ಹೀಗೆ ಶಾಸ್ತ್ರಜ್ಞರು ಹೇಳುತ್ತಿದಾರೆ.'

'ಶಾಸ್ತ್ರಜ್ಞರು ಹೀಗೆ ಸಿದ್ಧಾಂತಮಾಡಲು ಏನು ಆಧಾರ ಮೇಷ್ಟ್ರೆ?'

'ಬಹಳ ಭಾರಿ ಸವಾಲೇ ಹಾಕಿದೆ ಸುಬ್ಬ. ಕೇಳು ಹಾಗಾದರೆ—

ಈ ಕಾಂತಿಮೇಘಗಳು ನಾನಾ ಆಕಾರವಾಗಿ ಇವೆ. ಕೆಲವು

ಗುಂಡಗೆ ಉಂಡೆಯ ಹಾಗೆ ಇವೆ. ಉಂಡೆಗಳನ್ನು ಒತ್ತಿದರೆ ಹೇಗೆ ಆಗುತ್ತವೆಯೋ ಹಾಗೆ ಕೆಲವು ಪೂರಿಗಳ ರೂಪದಲ್ಲಿವೆ. ಇನ್ನು ಕೆಲವು ಹಿಂದೆ ಹೇಳಿದಂತೆ ಹಾವಿನ ಸಿಂಬಿಯ ಹಾಗೆ ಇವೆ. ಇವೆಲ್ಲದರಲ್ಲೂ ಒಂದು ವಿಲಕ್ಷಣತೆಯಿದೆ. ಅಲ್ಲಲ್ಲಿ ಚಿಕ್ಕೆಗಳು ಕಾಣುತ್ತಿವೆ. ಈ ಚಿಕ್ಕೆಗಳೂ ಕಾಂತಿ ಮೇಘಗಳ ಮಧ್ಯಭಾಗಕ್ಕಿಂತ ಕೊನೆಯಂಚುಗಳಲ್ಲೇ ಹೆಚ್ಚಾಗಿ ಕಾಣುತ್ತಿವೆ.'

ತಿಮ್ಮಯ್ಯ ಆಲಿಸಿ ಕೇಳುತ್ತಿದಾನೆ. 'ಇವು ಯಾವೂ ನಮ್ಮ ಕಣ್ಣಿಗೆ ಕಾಣವು ಅಲ್ಲವೆ, ದೇವರು' ಎಂದ.

'ಕಾಣವು. ದೂರದರ್ಶಕವೊಂದೇ ಸಾಧನ. ಇದೋ ಹೀಗೆ ಇವೆ ಇವು, ನೋಡು.' ಚಿಕ್ಕದಾಗಿ ಗೊಂಬೆಗಳನ್ನು ಬರೆದೆ.

ಕಾಂತಿಮೇಘಗಳು _ ಪರಿಣಾಮ ರೀತಿ



ಗುಂಡಗೆ



ಪೂರಿ ಆಕಾರ



ಹಾವಿನ ಸಿಂಬಿ

'ವಿಚಿತ್ರವಾಗಿವೆ. ಆಗಲಿ, ಕಥೆ ಮುಂದಕ್ಕೆ ಸಾಗಲಿ.'

'ಇವನ್ನೆಲ್ಲ ನೋಡಿ ಶಾಸ್ತ್ರಜ್ಞರು ಆಲೋಚಿಸಲು ಮೊದಲಿಟ್ಟರು....

— ಇವುಗಳ ಆಕಾರದಲ್ಲಿ ಒಂದು ಕ್ರಮವಾದ ಪದ್ಧತಿ ಕಾಣಿಸುತ್ತಿದೆ. ಈ ಕಾಂತಿಮೇಘಗಳು ಮೊದಲು ಗುಂಡಗೆ ಇದ್ದು, ಆಮೇಲೆ ಪೂರಿಗಳಾಗಿ ಮಾರ್ಪಟ್ಟು, ಕಡೆಗೆ ಹಾವಿನ ಸಿಂಬಿಯಂತೆ ಆಗಿರಬೇಕು ಎಂದು ಸಿದ್ಧಾಂತ ಮಾಡಿದರು.'

'ಬರೀ ಬುರುಡೆ.......'

'— ಹಾಗೆ ಅವಸರಪಡಬೇಡ. ಕಡೆತನಕ ಕೇಳು ಮತ್ತೆ. ಶಾಸ್ತ್ರಜ್ಞರು ಊಹೆಮಾಡಿ ಸುಮ್ಮನಾಗರು. ಊಹೆಯಿಂದ ಒಂದು ಸಿದ್ಧಾಂತ ಮಾಡುತ್ತಾರೆ. ಆಮೇಲೆ ಪರೀಕ್ಷೆಮಾಡಿ ಅದನ್ನು ಪ್ರಮಾಣ ಮಾಡುತ್ತಾರೆ.

ಬಿಸಿ ಬಿಸಿಯಾದ ವಾಯುಪದಾರ್ಥ ಗಿರ್ರೆಂದು ತನ್ನ ಸುತ್ತ ತಾನೇ ತಿರುಗತೊಡಗಿದರೆ ಏನಾಗುತ್ತದೆಯೋ ಪರೀಕ್ಷಿಸಿ ನೋಡಿದರು.'

'ಮೇಷ್ಟ್ರೆ, ಕಾಂತಿಮೇಘಗಳು ವಾಯು ಪದಾರ್ಥಗಳಿಂದ ತುಂಬಿವೆಯೆ ?'

'ಹೂಂ, ಮತ್ತೆ ! ಭೇಷ್, ಚೆನ್ನಾಗಿ ಊಹಿಸಿದೆ. ವಾಯು ಪದಾರ್ಥಗಳು ಹಾಗೆ ಭ್ರಮಣ ಮಾಡಿದರೆ ಮೊದಲು ಗುಂಡಾಗಿ, ಆಮೇಲೆ ಆಮೇಲೆ ಪೂರಿಯ ಹಾಗೆ, ಕಟ್ಟಕಡೆಗೆ ಹಾವಿನ ಸಿಂಬಿಯಂತೆ ಆಗುತ್ತವೆಂಬುದನ್ನು ಸ್ಪಷ್ಟವಾಗಿ ತಿಳಿದುಕೊಂಡರು. ಪರಿಶೋಧನೆಗಳನ್ನು ಪೂರ್ತಿ ಮಾಡಲು ಶಾಸ್ತ್ರಾಗಾರದಲ್ಲಿ ಅವಕಾಶವಿಲ್ಲ. ಸ್ವಲ್ಪ ಪರಿಶೋಧನೆ, ಸ್ವಲ್ಪ ಗಣಿತ – ಒಟ್ಟು ಈ ಸಂಗತಿಯನ್ನು ನಿರ್ಧಾರ ಮಾಡಿದರು.

ಇನ್ನೊಂದು ವಿಶೇಷ. ಈ ವಾಯುಪದಾರ್ಥ ಅಲ್ಲಲ್ಲಿ ಗಡ್ಡೆ ಕಟ್ಟಿಕೊಳ್ಳುವುದನ್ನೂ ಕಂಡರು – ಅವೇ ಚಿಕ್ಕೆ !'

'ಆದ್ದರಿಂದ ಈ ಚಿಕ್ಕೆಗಳು ಹಾವಿನ ಸಿಂಬೆಗಳಂತೆ ಇರುವ ಕಾಂತಿ ಮೇಘಗಳ ಸುರಳಿಗಳೊಳಗಿಂದ ಹುಟ್ಟಿವೆಯೆಂದು ಪ್ರಮಾಣವಾದ ಹಾಗಲ್ಲವೆ ಮೇಷ್ಟ್ರೆ.'

'ಹಾಗೇ. ಇವುಗಳ ಆಕಾರ ಪರಿಣಾಮವನ್ನು ಪರಿಶೀಲಿಸಿದಾಗ ಈ ಸಿದ್ಧಾಂತ ಮತ್ತಷ್ಟು ದೃಢವಾಯಿತು. ಈ ಕಾಂತಿಗೂ ಸೂರ್ಯನಂಥ ನಕ್ಷತ್ರಗಳ ಕಾಂತಿಗೂ ಬಹಳ ಸ್ವಲ್ಪ ಭೇದವಿದೆ – ಅದೂ ಸೂಕ್ಷ್ಮವಾಗಿ ಪರಿಶೀಲಿಸಿದರೆ. ಕಾಂತಿಮೇಘಗಳಲ್ಲೂ ಈ ಬಗೆಯ ಚಿಕ್ಕೆಗಳಲ್ಲೂ ಒಂದೇ ಬಗೆಯ ಪದಾರ್ಥಗಳಿವೆ. ಒಂದೇ ರೀತಿಯಲ್ಲಿ ವಾಯುವಶೆಯಲ್ಲಿ ಇವೆ—'

ತಿಮ್ಮಯ್ಯ ಎಲೆ ಅಡಿಕೆ ಮೆಲ್ಲುವುದನ್ನು ಮರೆತು ಕೇಳುತ್ತಿದಾನೆ. 'ಒಂದೇ ಉಸಿರಿನಲ್ಲಿ ಹೇಳುತ್ತೀರಲ್ಲ, ನಿಮ್ಮ ಶಾಸ್ತ್ರಿಗಳು ಈ ಬೆಳಕಿನ ಸಂಗತಿ ಹೇಗೆ ತಿಳಿದುಕೊಂಡರೋ ?'

ಇಷ್ಟು ಶ್ರದ್ಧೆಯುಳ್ಳ ಶಿಷ್ಯರೂ ಸಿಕ್ಕರೆ ದೇಶವನ್ನೇ ಗೆಲ್ಲಬಹುದು.

'ಇದಕ್ಕೆ ಒಂದು ಸಾಧನವಿದೆ, ತಾತ. ಅದನ್ನು **ಕಿರಣಭೇದಿನಿ** ಎನ್ನುತ್ತಾರೆ.'

'ಎಂದರೆ ಕಾಂತಿಯನ್ನು ಭೇದಿಸುತ್ತದೆಯೆ?'

'ಹೌದು....ಕಾಂತಿಕಿರಣಗಳನ್ನು ಭೇದಿಸುತ್ತದೆ. ಕನ್ನಡಿಯ ಅಂಚು ಓರೆಯಾಗಿರುವದಿಲ್ಲವೆ? ಸೂರ್ಯನ ಬೆಳಕನ್ನು ಈ ಅಂಚಿನ ಮೇಲೆ ಬೀಳಿಸಿ ಗೋಡೆಯ ಮೇಲೆ ಬಿಟ್ಟರೆ ಬಣ್ಣಬಣ್ಣವಾಗಿ ಕಾಣುತ್ತದೆ.'

'ಹೌದು ಹೌದು, ನನ್ನ ಮೊಮ್ಮಗನಿಗೆ ಹಗಲೆಲ್ಲ ಅದೇ ಆಟ ಸ್ವಾಮಿ.'

'ಮೇಷ್ಟ್ರೆ, ಸೂರ್ಯಕಾಂತಿಯಲ್ಲಿ ಏಳು ಬಣ್ಣ ಇಲ್ಲವೆ?' ಎಂದ ಪ್ರೌಢ ಶಾಲಾ ರುಸ್ತುಂ, ನಮ್ಮ ಸುಬ್ಬ.

'ಹೌದಪ್ಪ, ಕಾಮನಬಿಲ್ಲಿನ ಬಣ್ಣ ಅವೇ.'

'ಹಾಗೆಯೇ!' ಎಂದು ಅಚ್ಚರಿಗೊಂಡ ತಾತ.

'ಈ ಕಿರಣಭೇದಿನಿಯ ಮೂಲಕ ಕಾಂತಿಕಿರಣಗಳನ್ನು ಹಾಯಿಸಿದರೆ ಆ ಕಿರಣಕಾಂತಿ ಬಿಡಿ ಬಣ್ಣಬಣ್ಣವಾಗಿ ಏರ್ಪಡುತ್ತದೆ. ಆ ಬಿಡಿ ಬೆಳಕನ್ನು ಬಿಳಿಯ ತೆರೆಯ ಮೇಲೆ ಬೀಳಿಸಿದರೆ ಗೆರೆಗೆರೆಯಾಗಿ ಕಾಣುತ್ತದೆ. ನಮಗೆ ತಿಳಿದ ಹಾಗೆ ಪ್ರಪಂಚದಲ್ಲಿ ೯೨ ಮೂಲ ದ್ರವ್ಯಗಳಿವೆ. ಕಬ್ಬಿಣ, ತಾಮ್ರ ಮೊದಲಾದ ಒಂದೊಂದು ಮೂಲ ಪದಾರ್ಥಕ್ಕೂ ಒಂದೊಂದು ಬೇರೆ ಬೇರೆ ಬಣ್ಣವಿದೆ. ತಾಮ್ರ ಕೆಂಪಗೆ ಕಾದರೆ ಎಲೆಹಸಿರಾಗುತ್ತದೆ.

ಕಿರಣಭೇದಿನಿಯೊಳಗಿಂದ ಹಾಯ್ದ ಕಿರಣಕಾಂತಿ ಬಣ್ಣಬಣ್ಣವಾಗಿ ಬೇರ್ಪಟ್ಟು ತೆರೆಯ ಮೇಲೆ ಗೆರೆಗಳಾಗಿ ಬೀಳುತ್ತವೆ ಅನ್ನಲಿಲ್ಲವೆ? ಈ ಬಣ್ಣಗಳಿರುವುದು ಇಲ್ಲದಿರುವುದು – ಇದರಿಂದ ಆ ಕಿರಣಗಳಲ್ಲಿ ಯಾವ ವಸ್ತುವಿದೆಯೋ ತಿಳಿದುಕೊಳ್ಳಬಲ್ಲರು. ಇದು ಒಂದು ದೊಡ್ಡ ಶಾಸ್ತ್ರ. ಈ ಸಾಧನದಿಂದ ನಕ್ಷತ್ರಗಳಲ್ಲಿ, ಗ್ರಹಗಳಲ್ಲಿ ಕಾಂತಿಮೇಘಗಳಲ್ಲಿ, ಏನೇನು ಪದಾರ್ಥಗಳಿವೆಯೋ ಶಾಸ್ತ್ರಜ್ಞರು ಅರಿಯುತ್ತಿದಾರೆ. ಇಷ್ಟೇ ಅಲ್ಲ. ಆ ಪದಾರ್ಥಗಳು ಘನದಶೆಯಲ್ಲಿರುವುದೂ ಬೇರೆ ದಶೆಯಲ್ಲಿರುವುದೂ ತಿಳಿಯುತ್ತದೆ. ವಾಸ್ತವವಾಗಿ ದೂರದರ್ಶಕ, ಕಿರಣಭೇದಿನಿ ಎರಡೂ ಖಗೋಳ ಶಾಸ್ತ್ರಜ್ಞನಿಗೆ ಎಡ ಬಲ ಭುಜಗಳೆನ್ನಬಹುದು.'

'ಅಂತೂ ಭಾರಿ ಯಂತ್ರವೇ!'

'ನಿಸ್ಸಂದೇಹವಾಗಿ. ಪದಾರ್ಥಗಳೇನೋ ತಿಳಿಯುತ್ತದೆ. ಅವು ಗಟ್ಟಿಯಾಗಿವೆಯೋ ನೀರಾಗಿವೆಯೋ ಗಾಳಿಯಾಗಿವೆಯೋ ಸ್ಪಷ್ಟವಾಗುತ್ತದೆ. ಬಿಸಿಯಾಗಿವೆಯೋ ತಣ್ಣಗಿವೆಯೋ ಸಹ ತಿಳಿಯುತ್ತದೆ.'

'ಹೇಗೆ?'

'ಕಾಂತಿಯ ಬಣ್ಣವನ್ನು ನೋಡಿ ಅರಿಯುಬಹುದು. ಕೆಂಪಾದರೆ ಒಂದು ಬಗೆಯ ಬಿಸಿ. ಚಿಕ್ಕೆಗಳಲ್ಲಿ ಈ ಕೆಂಪುಬಣ್ಣದವೇ ಕಡಮೆ ಬಿಸಿ. ಕಿತ್ತಲೆ ಬಣ್ಣದವು ಇಷ್ಟಕ್ಕಿಂತ ಹೆಚ್ಚು ಬಿಸಿ.......'

'ಹಾಗಾದರೆ ಸೂರ್ಯನ ಬೆಳಕು ಯಾವ ಬಗೆಯದು ಸ್ವಾಮಿ? ಇದು ಮೂರನೆ ತರಗತಿಯ ನಕ್ಷತ್ರವೆಂದರೇ?'

'....ಸೂರ್ಯಕಾಂತಿ ಹಳದಿ; ಅರಸಿಣ ಬಣ್ಣ. ಕಿತ್ತಲೆ ಬಣ್ಣದವಕ್ಕಿಂತ ಹೆಚ್ಚು ಬಿಸಿ. ಬಿಳಿಯುವು ಎಲ್ಲಕ್ಕಿಂತ ಬಿಸಿ. ನೀಲಿಬಣ್ಣದ ಬಿಳುಪಿನ ಚಿಕ್ಕೆ ಕೆಲವು ಕಾಂತಿಮೇಘಗಳಲ್ಲಿ ಇವೆ. ಎಲ್ಲಕ್ಕಿಂತ ಇವೇ ಹೆಚ್ಚು ಬಿಸಿ.'

'ಹಾಗಾದರೆ ಸೂರ್ಯನಿಗಿಂತ ದೊಡ್ಡವು ಈ ಬಿಳಿಯ ಚಿಕ್ಕೆಗಳೇ ಅಲ್ಲವೆ? ಅವು ಹೆಚ್ಚು ಬಿಸಿ ತಾನೆ?'

'ತಪ್ಪು. ಬಿಸಿಗೂ ಗಾತ್ರಕ್ಕೂ ಏನೂ ಸಂಬಂಧವಿಲ್ಲ. ಕೆಂಪು ಚಿಕ್ಕೆಗಳೇ ದೊಡ್ಡವು.'

'ಮೇಷ್ಟ್ರು, ಈ ಚಿಕ್ಕೆಗಳೂ ನಮ್ಮ ಭೂಮಿಯ ಹಾಗೆ ತಿರುಗುತ್ತಿವೆಯೆ?

ತಾತನಿಗೆ ಕಣ್ಣು ಭಾರವಾಗಿದೆ. ಆಕಳಿಸುತ್ತಿದಾನೆ.

'ತಿರುಗುತ್ತಿವೆ. ಇವು ತಿರುಗುತ್ತಿರುವಾಗ ಕಂಡುಹಿಡಿಯುವುದು ಬಹಳ ಕಷ್ಟ. ಚಿಕ್ಕೆಗಳೆಲ್ಲ ಮೂಡಲಿಂದ ಪಡುವಲಿಗೆ ತಿರುಗುತ್ತಿರುವಂತೆ ಕಾಣಿಸುತ್ತದೆ........ಶಾಸ್ತ್ರಜ್ಞರು ಎಷ್ಟೋ ನಾಜೂಕಾದ ಸಾಧನಗಳನ್ನು ನಿರ್ಮಿಸಿ ಇದನ್ನೆಲ್ಲ ತಿಳಿದಿದಾರೆ. ಒಂದು ಕ್ಷಣದಲ್ಲಿ ನೂರು ಗಟ್ಟಲೆ ಮೈಲಿ ತಿರುಗುವ ನಕ್ಷತ್ರಗಳಿವೆಯಂತೆ.'

'ಇವು ತಮ್ಮ ಸುತ್ತ ತಾವೇ ಪ್ರದಕ್ಷಿಣ ಮಾಡಿಕೊಳ್ಳುತ್ತವೆಯೆ ಭೂಮಿಯ ಹಾಗೆ?'

'ಹೂಂ....ಇನ್ನೊಂದು ವಿಚಿತ್ರವಿದೆ ಸುಬ್ಬ. ನಮಗೆ ಕಾಣಿಸುವ ಈ ಚಿಕ್ಕೆಗಳಲ್ಲಿ ಅರ್ಧಕ್ಕರ್ಧ ಜೋಡಿಗಳು. ಈ ಜೋಡಿ ಚಿಕ್ಕೆಗಳಲ್ಲಿ ಕೆಲವು ಒಂದು ಮತ್ತೊಂದರ ಸುತ್ತ ಪ್ರದಕ್ಷಿಣೆಮಾಡುತ್ತಿವೆ.

ಈ ಜೋಡಿ ಚಿಕ್ಕೆಗಳು ೨೦ ಸಾವಿರ ಇವೆಯಂತೆ. ಇವುಗಳಲ್ಲಿ ೨೦೦ಜೋಡಿ ಗ್ರಹಣತಾರೆಗಳಂತೆ.'

'ಎಂದರೆ, ಒಂದು ನಕ್ಷತ್ರವನ್ನು ಇನ್ನೊಂದು ಹಿಡಿಯುವುದರಿಂದ ಗ್ರಹಣ ಬರುತ್ತದೆಯೆಂಬುದೇ ? '

'ಹೌದು ತಾತ. ಒಂದು ನಕ್ಷತ್ರದ ನೆರಳು ಇನ್ನೊಂದರ ಮೇಲೆ ಬಿದ್ದು ಈ ಗ್ರಹಣವಾಗುತ್ತದೆ.'

'ಅರುಂಧತಿಯೊಬ್ಬಳೇ ಅಂದುಕೊಂಡಿದ್ದೆ ವಸಿಷ್ಠರ ಜೊತೆಗೆ ಇರುವುದು — ಇಂಥ ಜೋಡಿಗಳು ಇನ್ನೂ ಇವೆ ಅಂದಹಾಗಾಯಿತು.'

ಒಡನೆಯೆ ಮುದುಕನ ಮನಸ್ಸು ಸಪ್ತರ್ಷಿ ಮಂಡಲದ ಸಂಗತಿಯನ್ನು ನೆನೆಯಿತು.

'ತಾತ, ಒಂದೊಂದು ಕಡೆ ಖಗೋಳ ವೀಥಿಯಲ್ಲಿ ಮೂರು ನಾಲ್ಕು ಚಿಕ್ಕೆ ಗುಂಪಾಗಿವೆ.'

ಕಚೇರಿಯಲ್ಲಿ ಹನ್ನೊಂದು ಗಂಟೆ ಹೊಡೆದರು. ತಿಮ್ಮಯ್ಯ ಎದ್ದು ಕೋಲು ತೆಗೆದುಕೊಂಡ ಕೈಗೆ.

'ಎಷ್ಟು ಮೆಲ್ಲಗೆ ಅಂತೀರಯ್ಯ ಅದನ್ನ. ಬ್ರಹ್ಮಾಂಡ ಪುರಾಣವನ್ನೂ ಕೇಳಿದೇನೆ. ಆದರೆ ಇದು ಬಹಳ ವಿಚಿತ್ರವಾಗಿ ಇದೆ. ಇದು ಶಾಸ್ತ್ರವಾಯಿತು. ಪುರಾಣದಲ್ಲಿನ ಕಥೆಗಳೂ ಆ ಗಮ್ಮತ್ತು ಇಲ್ಲದಿದ್ದರೂ ಇದರಲ್ಲೂ ವಿಶೇಷವಿದೆ.

ಬರುತ್ತೇನೆ ಸ್ವಾಮಿ .... ಬಹಳ ಹೊತ್ತಾಯಿತು .... ಹೀಗೆ ದಿನವೂ ಹೇಳುತ್ತಿರಿ ನಾಲ್ಕು ಸಂಗತಿ. ಅಮ್ಮ ಇನ್ನೂ ನಾಲ್ಕೈದು ತಿಂಗಳು ಬರುವ ಹಾಗಿಲ್ಲವಲ್ಲ. ಐದನೆ ತಿಂಗಳಲ್ಲವೆ? ಪುರಾಣದ ಆಚಾರ್ರು ತೀರಿಕೊಂಡ ಮೇಲೆ ಕಾಲಕ್ಷೇಪವೇ ಇಲ್ಲ.'

ಕೋಲು ಕುಟ್ಟುತ್ತ ನಾಲ್ಕು ಹೆಜ್ಜೆ ಸಾಗಿದ. ಸುಬ್ಬ 'ಮೇಷ್ಟ್ರು'

ಈ ನಕ್ಷತ್ರಮಂಡಲ—' ಎಂದು ಏನೋ ಹೇಳುತ್ತಿರುವಷ್ಟರಲ್ಲಿ ತಿಮ್ಮಯ್ಯ ಹಿಂದಕ್ಕೆ ಬಂದ.

'ಸ್ವಾಮಿ, ಕೇಳಲಿಕ್ಕೆ ಮರೆತೆ. ಈ ಚಿಕ್ಕೆಗಳು ಎಷ್ಟಿವೆಯೋ ನಿಮ್ಮ ಶಾಸ್ತ್ರಿಗಳು ಕಂಡು ಹಿಡಿದಿದಾರೆಯೆ?'

ಈ ಪ್ರಶ್ನೆ ಬರುತ್ತದೆ ಎಂದು ನಿರೀಕ್ಷಿಸಿಯೇ ಇದ್ದೆ.

'ಇಷ್ಟೇ ಎಂದು ನಿರ್ಧರಿಸಿಲ್ಲ ತಾತ. ನಮ್ಮ ಕಣ್ಣಿಗೆ ಬಹುಶಃ ಆರು ಸಾವಿರ ಕಾಣುತ್ತವೆ ಎಂದಿದಾರೆ. ದೂರದರ್ಶಕದಿಂದ ನೋಡಿದರೆ ಕೋಟ್ಯಾನುಕೋಟಿ.'

'ನಮ್ಮವರೇ ಮೇಲು. ಮಾತು ಆಡಿದರೆ ನಿಕರ; ಸಿಸಲು ಲೆಕ್ಕಾಚಾರ. ನಮ್ಮ ಪುರಾಣದಾಚಾರ್ಯರು ಒಂದು ಸಲ ಈ ಅನಂತಕೋಟಿ ನಕ್ಷತ್ರಗಳು ಎಂದರು. ಎಷ್ಟು ಅಂದಿರಿ ಎಂದು ಕೇಳಿದೆ. ಅವರು ಹೇಳಿದರು— ತಿಮ್ಮಯ್ಯ, ನೆಲದಲ್ಲಿ ಮರಳು ಹರಳನ್ನು ಲೆಕ್ಕಮಾಡುತ್ತೀಯಾ? ಕಡಲಲ್ಲಿ ಹನಿಯು ಲೆಕ್ಕ ಸಿಕ್ಕೀತೆ? ಈ ಚಿಕ್ಕೆಗಳ ಸಂಗತಿ ಅಷ್ಟೇ.

ನಿಮ್ಮ ಶಾಸ್ತ್ರವೂ ಅದನ್ನೇ ಹೇಳಿತು. ನಮಗೆ ತಿಳಿಯದ್ದು ಇನ್ನೂ ಎಷ್ಟೋ ಇದೆ. ಎಂಥ ಇಂದ್ರಜಾಲ ಮಹೇಂದ್ರಜಾಲಗಾರನಾದರೂ ಬಿಳಿಯವನೂ ಮನುಷ್ಯನೇ. ನಿಜವಾಗಿ ಈ ಚಿಕ್ಕೆಗಳು ಒಂದು ಕಡಲೇ!'

'ನಾನೂ ಅದೇ ಹೇಳಬೇಕೆಂದಿದ್ದೆ, ಮೇಷ್ಟ್ರೆ.'

ನಾನಂದೆ: 'ನಿಜವಾಗಿ ನೋಡಿದರೆ, ಈ ಬ್ರಹ್ಮಾಂಡ ಸಮುದ್ರದಲ್ಲಿ ಈ ನಕ್ಷತ್ರಗಳು ಮೀನುಗಳು. ಈ ಬ್ರಹ್ಮಾಂಡ ಒಂದು ದೊಡ್ಡ ಸಮುದ್ರ.'



## ೨

## ಚಿಕ್ಕೆಗಡಲಿನಲ್ಲಿ ದ್ವೀಪ

'ಏನು ಸ್ವಾಮಿ, ಮುಗಿಲಿನ ಕಡೆ ನೋಡುತ್ತಾ ಇದೀರಿ' ತಿಮ್ಮಯ್ಯ ಊಟ ತೀರಿಸಿಕೊಂಡು ಬಂದ.

ನೀಲಿ ಮಕಮಲ್ ಮುಗಿಲಿನಲ್ಲಿ ಆ ಜರತಾರಿ ನಗಿಷೀ ಚಿಕ್ಕೆಗಳ ನಡುವೆ ಬೆಳ್ಳಿ ಗೆರೆಗಳಂತೆ ಅಂದವಾಗಿ ಕಾಣಿಸುತ್ತದೆ ಕ್ಷೀರಪಥ.

'ಹಾಲಿನ ಹೊಳೆಯನ್ನು ನೋಡುತ್ತಿದೇನೆ, ತಾತ.'

ತಿಮ್ಮಯ್ಯ ನನ್ನ ಮಂಚದ ಪಕ್ಕದಲ್ಲೇ ಗೋಡೆಗೆ ಆತು ಕೂತು ಕೊಂಡ.

'ಆಕಾಶ ಗಂಗೆಯಲ್ಲವೆ? ಅಲ್ಲಿಂದ........ಆ ದೇವಲೋಕದಿಂದ ಹಾಗೆ ಶಿವನ ತಲೆಯ ಮೇಲಕ್ಕೆ ಧುಮುಕಿ, ಆತನ ಜಟಾಜೂಟದಿಂದ ಇಲ್ಲಿಗೆ, ಈ ಭೂಮಿಗೆ, ಇಳಿಯುತ್ತದೆ ಅಲ್ಲವೆ?'

'......................'

'ಏನು ದೇವರು, ಗುಂ ಎಂತ ಸುಮ್ಮಗೆ ಇದೀರಿ?'

'ತಾತ, ಇದು ಹಾಲು ಹೊಳೆಯೂ ಅಲ್ಲ, ಆಕಾಶ ಗಂಗೆಯೂ ಅಲ್ಲ. ನಮ್ಮ ಪ್ರಪಂಚ.'

'ಹಿ ಹ್ಹಿ ಹ್ಹಿ! ಇದೇನು ಲೆಕ್ಕ? ಇದೆಲ್ಲವೂ ನಮ್ಮ ಪ್ರಪಂಚ ವಲ್ಲವೆ?' ಬಲಗೈಯಿಂದ ಖಗೋಳಮಂಡಲವನ್ನು ಆ ಮೂಲೆಯಿಂದ ಈ ಮೂಲೆಗೆ ತೋರಿಸುತ್ತ ಹೇಳಿದ.

'ಹಾಗನ್ನುವುದು ನಮಗೆ ರೂಢಿಯಾಗಿದೆ, ತಾತ. ಆದರೆ ಶಾಸ್ತ್ರ ಒಪ್ಪದು.'

'ನಿಮ್ಮ ಶಾಸ್ತ್ರಿಗಳೇನು ಹೇಳುತ್ತಾರೆ?'

'ನಮ್ಮ ಕಣ್ಣಿಗೆ ಕಾಣಿಸುವ ಈ ಚಿಕ್ಕೆಗಳೂ ಗ್ರಹಗಳೂ ಈ ಸೂರ್ಯ ಚಂದ್ರರೂ, ಬಾಲದ ಚಿಕ್ಕೆಗಳೂ, ಕಾಂತಿಮೇಘಗಳೂ, ಇದೆಲ್ಲವೂ ಇಡ ಅಲ್ಲೇ ಇದೆ. ಇದನ್ನು **ಖಗೋಳ, ಬ್ರಹ್ಮಾಂಡ** ಅನ್ನುತ್ತಾರೆ. ಇದೊಂದು ದೊಡ್ಡ ಕಡಲು, ತಾತ.'

'ಈ ಬ್ರಹಾಂಡ ಗುಂಡಗೆ ಇದೆ ಅನ್ನಲಿಲ್ಲವೆ?'

'ಹೌದು. ದೊಡ್ಡ ಸೌತೆಕಾಯಿ ಇದ್ದಹಾಗೆ ಇದೆಯಂತೆ. ಕೇಳು. ಈ ಕಡಲಲ್ಲಿ ಅನೇಕ ದ್ವೀಪಗಳಿವೆ. ಈ ದ್ವೀಪಗಳಲ್ಲಿ ನಮ್ಮ ಪ್ರಪಂಚವೂ ಒಂದು. ಹೀಗೆ ಇನ್ನೂ ಬೇರೆ ದ್ವೀಪಗಳ ಪ್ರಪಂಚಗಳೂ ಇವೆಯೆಂದು ಶಾಸ್ತ್ರಜ್ಞರ ಅಭಿಪ್ರಾಯ.'

'ದ್ವೀಪ ಎಂದರೆ ನೀರಿನ ನಡುವೆ ನೆಲದ ಗಡ್ಡೆ ಇದ್ದ ಹಾಗೆ ತಾನೆ?'

'ಹೌದು.'

'ಹಾಗಾದರೆ ಇವು ನಮ್ಮ ಕಣ್ಣಿಗೆ ಕಾಣುತ್ತವೆಯೆ?'

'ಇಕೊ, ಈ ಹಾಲ ಹೊಳೆ ಒಂದೇನೆ! ಇನ್ನೂ ಎರಡು ಇವೆ.'

'ಎಷ್ಟು ಇವೆ ಇವು?'

'ದೂರದರ್ಶಕದಿಂದ ನೋಡಿದರೆ ೨೦ ಲಕ್ಷ ಇವೆಯಂತೆ. ನಮಗೆ ಕಾಣಿಸದೆ ಇರುವುವು ಇನ್ನೂ ೧೪೦ ಲಕ್ಷ ಇರಬೇಕೆಂದು ಶಾಸ್ತ್ರಜ್ಞರ ಅಭಿಪ್ರಾಯ. ಈ ಬ್ರಹ್ಮಾಂಡದಲ್ಲಿ ಒಟ್ಟು ೧೬೦ ಲಕ್ಷ ಇರಬೇಕೆಂದು ಅವರ ಅಂದಾಜು.'

'ಲಕ್ಷ, ಕೋಟಿ.... ಇರಲಿ. ಏನೋ ಹೇಳುತ್ತಿದ್ದರೆ ಅಡ್ಡ ಬಂದೆ. ನಮ್ಮ ಕಣ್ಣಿಗೆ ಕಾಣುವ ಪ್ರಪಂಚಗಳ ಸಂಗತಿ ಹೇಳಿ.'

'ಹಾಲ ಹೊಳೆಯಲ್ಲದೆ ಮತ್ತೆರಡು ಇವೆ. ಒಂದು **ದೇವಯಾನಿ**ಯೊಳಗಿನ ಕಾಂತಿಮೇಘ. ಇನ್ನೊಂದೂ ಇದೆ. ಇವು ಮಾತ್ರ ಕಾಣಿಸುತ್ತವೆ.'

ಎಲೆಗೆ ಸುಣ್ಣ ಹಚ್ಚುತ್ತ ಪ್ರಶ್ನೆ ಬಿಟ್ಟ.

'ಹಾಗಾದರೆ ಅದೆಂಥದೋ ಕಾಂತಿಮೇಘ ಎಂದಿರಲ್ಲ, ಆ ದೇವಯಾನಿಯೊಳಗಿನದು?'

'ಹೌದು, ತಾತ! ಈ ಕಾಂತಿಮೇಘಗಳೇ ಪ್ರಪಂಚಗಳು. ಇವು

ಗಳ ಕಾಂತಿಗೆ ಕಾರಣ ಕಿಕ್ಕಿರಿದು ತುಂಬಿರುವ ಚಿಕ್ಕೆಗಳ ಬೆಳಕು ; ಬೆಳ್ಳಗೆ ಹೊಳೆಯುತ್ತಿರುವ ವಾಯು ಪದಾರ್ಥಗಳ ಕಾಂತಿ.'

'ಅದು ಹೇಗೆ? ಈ ಹಾಲ ಹೊಳೆಯೆ ಪ್ರಪಂಚ ಎಂದಿರಿ....... ಹಾಗೆಂದರೆ ಇದೂ ಕಾಂತಿ ಮೇಘವೆ ಅಲ್ಲವೆ?'

'ಹೂಂ.'

'ಇದು ಹೀಗೆ ಬೆಳ್ಳಗೆ ಅರಳೆ ಹಂಜಿ ಇದ್ದಂತೆ ಇದೆಯಲ್ಲ. ಇದರೊಳಗೆ ಮರಳು ಸುರಿದರೂ ತೂರದಷ್ಟು ದಟ್ಟವಾಗಿ ಚಿಕ್ಕೆಗಳಿರುವುದೇ ಇದಕ್ಕೆ ಕಾರಣವೇನು?'

ಈತನಿಗೆ ಎಷ್ಟು ಯೋಚನಾ ಶಕ್ತಿಯಿದೆ!

'ಅನುಮಾನವೇಕೆ? ಚಿಕ್ಕೆಗಳಿವೆ. ನಮ್ಮ ಈ ಪ್ರಪಂಚದಲ್ಲಿ ೩೦೦ಕೋಟಿ ಚಿಕ್ಕೆಗಳಿವೆ.'

'ಆ ಮೂಲೆಯಿಂದ ಈ ಮೂಲೆ, ಹೀಗೆ ಒಂದೇ ಉದ್ದಕ್ಕೆ.'

'ಇಲ್ಲ ತಾತ. ನಮ್ಮ ಪ್ರಪಂಚದ ಆಕಾರ ಹಾಗಿಲ್ಲ.... ಸುಬ್ಬು, ನಿನ್ನ ಪುಸ್ತಕ ತಾ.'

ಸುಬ್ಬು ದೀಪ ತೆಗೆದುಕೊಂಡು ಮಹಡಿಗೆ ಹೋಗುತ್ತಿದ್ದ ಪಾಠ ಓದಿಕೊಳ್ಳಲು. ಅವನ ಪುಸ್ತಕದಲ್ಲಿ ಚಿತ್ರ ಬರೆದೆ.



ತಿಮ್ಮಯ್ಯ ಮೂಗಿನಮೇಲೆ ಬೆರಳಿಟ್ಟು ನೋಡುತ್ತಿದಾನೆ. ತಟ್ಟನೆ ಮುಗಿಲ ಕಡೆ ಹೊರಳಿದ. ಈ ಆಕಾರ ಅಲ್ಲಿ ಕಾಣಿಸುತ್ತದೆಯೆಂದೋ ಏನೋ!

'ಇದೆಲ್ಲಾ ಕೇಳುತ್ತಿದ್ದರೆ ಮತಿಯೆ ಕೆಟ್ಟು ಹೋಗುತ್ತದೆ ದೇವರು' ಎಂದ.

'ಮೇಷ್ಟ್ರೆ, ನಮ್ಮ ಪ್ರಪಂಚದ ಉದ್ದ ಅಗಲ ಲೆಕ್ಕಹಾಕಿದಾರೆಯೆ ಮತ್ತೆ?'

'ತಿಳಿದುಕೊಂಡಿದಾರೆ ಸುಬ್ಬ. ಇಕೊ, ಈ ಉದ್ದಕ್ಕೂ ಒಂದು ಕೊನೆಯಿಂದ ಹೊರಟ ಕಾಂತಿ ಮತ್ತೊಂದು ಕೊನೆಗೆ ಸೇರಲು ೧ ಲಕ್ಷ ಇಪ್ಪತ್ತು ಸಾವಿರ ವರ್ಷ ಹಿಡಿಯುತ್ತದೆ. ಇದರ ಅಗಲ ಬಹಳ ಕಡಮೆ ಯಾಗಿ ಇರುವ ಕಡೆ ೨೦ ಸಾವಿರ ಕಾಂತಿವರ್ಷ.'

'ಇವೆಲ್ಲ ನಮಗೆ ಹೀಗೆ ಕಾಣುತ್ತಿವೆಯಲ್ಲ. ಆ ಗ್ರಹಗಳಲ್ಲಿ ಮನು ಷ್ಯರಿದ್ದರೆ ಅವರಿಗೆ ನಮ್ಮ ಭೂಮಿ ಗುಂಡಗೆ ಕಾಣಿಸುತ್ತದೆಯೆ?'

'ಹೌದು. ತಾವು ತಾವು ಇರುವ ಸ್ಥಳದ ಪ್ರಕಾರ ಬಗೆ ಬಗೆಯಾಗಿ ಕಾಣುತ್ತದೆ. ಸೂರ್ಯಮಂಡಲದಲ್ಲಿ ಒಂದು ಮೂಲೆಯಾಗಿ ಕಾಣುತ್ತದೆ.'

'ನಮ್ಮ ಈ ಪ್ರಪಂಚದಲ್ಲಿ ಸೂರ್ಯಮಂಡಲ ಎಲ್ಲಿದೆ ಮೇಷ್ಟ್ರೆ?'

'ಇಕೋ, ಈ ಮೂಲೆಯಲ್ಲಿ.'

ಚಿತ್ರದಲ್ಲಿ ಗುರುತು ಹಾಕಿದೆ.

'ಈತ, ಈತನ ಕುಟುಂಬ ನಮ್ಮ ಈ ಪ್ರಪಂಚದ ಮಧ್ಯಭಾಗದಿಂದ ೨೦ ಸಾವಿರ ಕಾಂತಿವರ್ಷಗಳ ದೂರದಲ್ಲಿ ಇದಾರೆ.'

'ಆಚಾರ್ಯರ ಬ್ರಹ್ಮಾಂಡ ಪುರಾಣ ಕೇಳಿದೇನೆ. ನಿಮ್ಮ ಈ ಪುರಾಣ ಅದಕ್ಕಿಂತಲೂ ವಿಚಿತ್ರವಾಗಿದೆ. ಇವನ್ನೆಲ್ಲ ಕಣ್ಣಿಂದ ನೋಡಿಯೇ ಹೇಳು ತ್ತಾರೋ ನಿಮ್ಮ ಶಾಸ್ತ್ರಿಗಳು?'

'ಆಗಲೇ ಹೇಳಿದೆನಲ್ಲ. ದೂರದರ್ಶಕ, ಕಿರಣಭೇದಿನಿ— ಇಂಥ ಸಾಧನಗಳನ್ನು ಎಷ್ಟೋ ನಿರ್ಮಿಸಿದಾರೆ. ಇದಲ್ಲದೆ ಲೆಕ್ಕ ಮಾಡುತ್ತಾರೆ. ಖಗೋಳ ಶಾಸ್ತ್ರದಲ್ಲಿ ಗಣಿತ ಬಹಳ ಉಪಯೋಗಕಾರಿ. ದೂರದರ್ಶಕ

ಯಂತ್ರಗಳಿಂದ ಸದಾ ಖಗೋಳವನ್ನು ನೋಡುತ್ತಿರುತ್ತಾರೆ. ಅಷ್ಟೇ ಅಲ್ಲ, ಫೋಟೋ ತೆಗೆಯುತ್ತಾರೆ.'

'— ಫೋಟೋನೇ ?' ಎಂದ ತಿಮ್ಮಯ್ಯ ಅಚ್ಚರಿಯಿಂದ.

'ಮತ್ತೇನು ಎಂತ ತಿಳಿದೆ! ಈ ನಕ್ಷತ್ರಗಳೂ ಕಾಂತಿಮೇಘಗಳೂ ಎಷ್ಟು ವೇಗವಾಗಿ ತಿರುಗುತ್ತವೆ ಎಂದರೆ, ದೂರದರ್ಶಕದೊಳಗಿಂದಲೂ ನಮ್ಮ ಕಣ್ಣಿಗೆ ಅವುಗಳ ವೇಗ ತಿಳಿಯುವುದಿಲ್ಲ. ಬಹಳ ಕಷ್ಟ. ಫೋಟೋವೇ ಸಾಧನ. ನಕ್ಷತ್ರಗಳಲ್ಲಿ ಹಲವುನೂರು ಮೈಲಿ ವೇಗವಾಗಿ ಪಯಣ ಮಾಡುವಂಥವೂ ಕೆಲವು ಇವೆ. ಈ ಪ್ರಪಂಚಗಳೂ ಕೂಡ ತಿರುಗುತ್ತವೆ.'

'ಹೇಗೆ ತಿರುಗುತ್ತವೆಯೋ ?'

'ಬುಗರಿಯ ಹಾಗೆ, ತಮ್ಮ ಸುತ್ತ ತಾವೇ.'

'ಪ್ರದಕ್ಷಿಣೆ ಮಾಡುತ್ತಿವೆ ಎಂದ ಹಾಗೆ.'

'ಹೌದು. ದೇವಯಾನಿಯಲ್ಲಿ ಇರುವ ಪ್ರಪಂಚದ ಭ್ರಮಣ ಕಾಲ ೧೬ ಲಕ್ಷ ವರ್ಷ. ಎರಡನೆ ಪ್ರಪಂಚವಿದೆಯಲ್ಲ — ಸಪ್ತರ್ಷಿ ಮಂಡಲಕ್ಕೆ ಸ್ವಲ್ಪ ದಕ್ಷಿಣದಲ್ಲಿ .... ಅದು ೪೫ ಸಾವಿರ ವರ್ಷಗಳಲ್ಲಿ ಒಂದು ಪ್ರದಕ್ಷಿಣೆ ಮುಗಿಸುತ್ತದೆ.'

'ನಮ್ಮ ಪ್ರಪಂಚವೂ ಹೀಗೆ ತಿರುಗುತ್ತಿದೆಯೆ ಮೇಷ್ಟ್ರೆ ?'

'ಹೌದು. ಶಾಸ್ತ್ರಜ್ಞರ ನಂಬಿಕೆ ಅದೇ.'

ಇಬ್ಬರೂ ಮುಗಿಲನ್ನು ದಿಟ್ಟಿಸಿ ನೋಡುತ್ತಿದಾರೆ. ಈ ಖಗೋಳ ವಿಷಯಗಳನ್ನು ಮಥಿಸಿ ಮಥಿಸಿ ತಿಳಿದುಕೊಂಡಷ್ಟೂ ಎಂಥವರಿಗೂ ಅಚ್ಚರಿಯಾಗುತ್ತದೆ; ಸಹಜ.

ಸುಬ್ಬ ಮತ್ತೊಂದು ಪ್ರಶ್ನೆ ಹಾಕಿದ.

'ಮೇಷ್ಟ್ರೆ, ಒಂದು ಅನುಮಾನ.'

'ಏನೋ ಹೇಳು ನೋಡೋಣ.'

'ಈ ಪ್ರಪಂಚಗಳೆಲ್ಲ ಈ ಬ್ರಹ್ಮಾಂಡದಲ್ಲಿ ಹೀಗೆ ಗಿರಗಿರ ತಿರುಗುತ್ತಿವೆಯಲ್ಲ. ಅಪ್ಪಿ ತಪ್ಪಿ ಯಾವುದಾದರೂ ಒಂದು ಬಂದು ನಮ್ಮ ಪ್ರಪಂಚಕ್ಕೆ ಡಿಕ್ಕಿ ಹೊಡೆದರೋ ?'

ತಿಮ್ಮಯ್ಯ ಸುಬ್ಬನ ಪ್ರಶ್ನೆಗೆ ಮೆಚ್ಚಿ ತಲೆದೂಗಿದ.

'ಅಯ್ಯನೋರು ಲವಂಗ ಮೆಣಸಿನಕಾಯಿ. ಐನಾತಿ ಸವಾಲುಹಾಕಿದರು. ಏನು ಹೇಳ್ತೀರಿ ದೇವರು. ?'

'ಸುಬ್ಬ, ಇದೊಂದು ವಿಚಿತ್ರ. ನಮ್ಮ ಪ್ರಪಂಚಕ್ಕೆ ದೂರವಾಗಿರುವ ಈ ಪ್ರಪಂಚಗಳು ಒಂದು ವಿಲಕ್ಷಣ ಕೆಲಸ ಮಾಡುತ್ತಿವೆ. ದೂರದರ್ಶಕದಲ್ಲಿ ಇದು ಸ್ಪಷ್ಟವಾಗಿ ಕಾಣುತ್ತಿದೆ.'

'ಏನು ಆ ವಿಲಕ್ಷಣ ?'

'ಈ ಪ್ರಪಂಚಗಳು ನಮ್ಮ ಪ್ರಪಂಚವನ್ನು ಬಿಟ್ಟು ದೂರದೂರವಾಗಿ ಸರಿದು ಹೋಗುತ್ತಿವೆ, ತಾತ. ದೇವಯಾನಿಯೊಳಗಿನ ಪ್ರಪಂಚ, ಇನ್ನೂ ಬೇರೆ ನಾಲ್ಕು – ವಿನಾ ಉಳಿದವೆಲ್ಲ ಹೀಗೆ ನಮ್ಮನ್ನು ಬಿಟ್ಟು ಹೋಗುತ್ತಿವೆ.... ಒಂದರಿಂದ ಒಂದು ಬಿಡಿಬಿಡಿಯಾಗಿ, ದೂರದೂರವಾಗಿ ಸಾಗಿ ಹೋಗುತ್ತಿವೆ; ಅಪರಿಮಿತ ವೇಗದಿಂದ! ನಮಗೆ ದೂರ ಹೆಚ್ಚಾಗಿದಷ್ಟೂ ಅದರ ವೇಗ ಹೆಚ್ಚು. ಇಷ್ಟೇಕೆ? ಒಂದು ಬೊಗಸೆ ಗುಬ್ಬಚ್ಚಿ ಗರಿಗಳನ್ನು ಉಫ್ ಎಂದು ಗಾಳಿಯಲ್ಲಿ ತೂರಿದರೆ ಹೇಗೆ ಚದರಿ ಹೋಗುತ್ತವೆಯೋ ಇವೂ ಹಾಗೇ. ಈ ಬ್ರಹ್ಮಾಂಡದಲ್ಲಿ ಈ ದ್ವೀಪಪ್ರಪಂಚಗಳು ಹೀಗಿವೆ.'

'ಇದಕ್ಕೇನು ಕಾರಣ ಮೇಷ್ಟ್ರೆ ?'

'ಬಹಳ ಭಾರಿ ಪ್ರಶ್ನೆಹಾಕಿದೆ, ಸುಬ್ಬ....ನಮ್ಮ ಖಗೋಳ ಗುಂಡಗೆ ಇದೆ ಎನ್ನಲಿಲ್ಲವೆ. ಹೀಗೆ ಈ ಪ್ರಪಂಚಗಳೇ ಒಂದನ್ನೊಂದು ಬಿಟ್ಟು ಓಡಿಹೋಗುವುದನ್ನು ನೋಡಿ ಶಾಸ್ತ್ರಜ್ಞರು ಒಂದು ಸಿದ್ಧಾಂತವನ್ನು ಮಾಡಿದಾರೆ.'

'ಏನಂದಿರಿ ?'—ನೆಲಕ್ಕೆ ಹಾಗೇ ಒರಗಿಕೊಂಡು ಕೇಳಿದ ತಿಮ್ಮಯ್ಯ.

'ಈ ಬ್ರಹ್ಮಾಂಡ ಒಂದು ನೀರಗುಳ್ಳೆಯಿದ್ದ ಹಾಗೆ ಅನ್ನುತ್ತಾರೆ. ಸಾಬೂನುಗುಳ್ಳೆಯನ್ನು ಊದಿದರೆ ಹೇಗೆ ಹರಡಿಕೊಳ್ಳುತ್ತವೆಯೋ ಹಾಗೇ ಈ ಬ್ರಹ್ಮಾಂಡವೂ ಎಲ್ಲಾದಿಕ್ಕಿನಲ್ಲೂ ವಿಸ್ತಾರವಾಗಿ ಹರಡಿಕೊಳ್ಳುತ್ತಿದೆ. ಆದ್ದರಿಂದಲೇ ಈ ಪ್ರಪಂಚಗಳು ಹೀಗೆ ದೂರ ದೂರವಾಗಿ ಸಾಗುತ್ತಿದ್ದಂತೆ ನಮಗೆ ಕಾಣುತ್ತಿದೆ ಅನ್ನುತ್ತಾರೆ.'

'ದೇವರು, ಸ್ವಲ್ಪ ಸುಲಿದು ಹೇಳಬೇಕು. ಮುದುಕ! ಆಕಳಿಕೆ ಬರುತ್ತಿದೆ.'

'ಆ ಗುಳ್ಳೆ ಊದಿದರೆ ದೊಡ್ಡವಾಗುತ್ತವೆ. ಅಂಥ ಗುಳ್ಳೆಯಲ್ಲಿ ಅಲ್ಲಲ್ಲಿ

ಮನುಷ್ಯರಿದಾರೆ ಎಂದುಕೋ. ನಡುವೆ ನೀನು ಇದೀಯೆ. ನಿನ್ನ ಸುತ್ತ ಣವರು ನಿನ್ನನ್ನು ಬಿಟ್ಟು ದೂರವಾಗಿ ಹೋಗುವಂತೆ ಅನಿಸುತ್ತದೆ. ನೀನೂ ಕದಲಲಿಲ್ಲ, ಅವರೂ ಅಲ್ಲಾಡಲಿಲ್ಲ. ಗುಳ್ಳೆ ಊದಿಕೊಳ್ಳುತ್ತಿದೆ. ಆದ್ದರಿಂದ ನಿನಗೂ ಅವರಿಗೂ, ಅದೇ ರೀತಿ ಎಲ್ಲ ಮನುಷ್ಯರಿಗೂ ನಡುವೆ ಇರುವ ದೂರ ಮಾತ್ರ ಸಾಗುತ್ತಿದೆ, ಹೆಚ್ಚುತ್ತಿದೆ. ಅದಕ್ಕೆ ಅವರು ನಿನಗೆ ದೂರವಾದ ಹಾಗೆ ಕಾಣಿಸುತ್ತಿದಾರೆ. ಇಕೊ, ಹೀಗೆ.'

ನೆಲದ ಮೇಲೆ ನಕ್ಷೆಗೀಚಿದೆ.

'ಒಂದು ಗುಳ್ಳೆ! ಇದೊಂದು ಕಡಲು! ಬಹಳ ವಿಚಿತ್ರ. ಈ ಗುಳೆ ಹೀಗೆ ಊದಿ ಊದಿ ಕಡೆಗೆ ಹೇಗೆ ಆಗುತ್ತದೆ?........'

ಆಗಲೇ ಗೊರಕೆ ಹೊಡೆಯುತ್ತಿದಾನೆ. ಪಾಪ, ಕಷ್ಟಜೀವಿ! ಮೈ ನೆಲಕ್ಕೆ ಆನಿಸಿದ ಕೂಡಲೆ ನಿದ್ದೆ.

ಸುಬ್ಬ ಅಂದ: 'ಮೇಷ್ಟ್ರೆ, ಈ ಖಗೋಳ ಸಮುದ್ರದಲ್ಲಿ ನಮ್ಮ ಈ ಪ್ರಪಂಚ ಒಂದು ದ್ವೀಪ ಅಲ್ಲವೆ?'

'ಸರಿಯಾಗಿ ಹೇಳಿದೆ ಮಗು.'

ತಿಮ್ಮಯ್ಯ ಕನವರಿಸುತ್ತಿದಾನೆ:

'ಈ ಚಿಕ್ಕೆಗಳ ಕಡಲಿನಲ್ಲಿ ಈ ಪ್ರಪಂಚವೊಂದು ನಡುಗಡ್ಡೆ! ಆ ಗಡ್ಡೆಯಲ್ಲಿ ಒಂದು ಮೂಲೆಯೊಳಗೆ ನಾವು!'



೩

## ಸೂರ್ಯ ಮಂಡಲ – ಈ ದ್ವೀಪದಲ್ಲಿ ಒಂದು ಪಟ್ಟಣ

ಈ ವಿಶಾಲ ವಿಶ್ವದಲ್ಲಿ ಮನುಷ್ಯನ ಪ್ರಾಮುಖ್ಯ ದೊಡ್ಡ ಕಡಲಿನಲ್ಲಿ ಒಂದು ಹನಿಯಿದ್ದ ಹಾಗೆ. ಹೀಗೆ ಆಲೋಚಿಸುತ್ತ ಕಣ್ಣು ಮುಚ್ಚಿದೆ. ಎಚ್ಚರ ವಾಗುವ ಹೊತ್ತಿಗೆ ಈ ಮಾತು ಕೇಳಬಂತು:

'ಇಲ್ಲ ತಾತ. ರಾಹು ಕೇತು ಇಲ್ಲ ಎಂದರೆ. ಮನ್ನೆಯೇ ನಮ್ಮ ಮೇಷ್ಟ್ರು ಹೇಳಿದಾರೆ.'

'ಏನು ಶಾಸ್ತ್ರವೋ ಈ ಹೊಸಕಾಲದ್ದು; ಎಲ್ಲಾ ತಿರುಗುಮುರುಗು. ಹಾಗಾದರೆ ಸೂರ್ಯನಿಗೂ ಚಂದ್ರನಿಗೂ ಗ್ರಹಣಗಳು ಹೇಗೆ ಹಿಡಿಯುತ್ತವೆಯೋ?'

'ಅದಕ್ಕೇನು ತಾತ. ಭೂಮಿಯ ನೆರಳು ಚಂದ್ರನ ಮೇಲೆ ಬಿದ್ದರೆ ಸೂರ್ಯಗ್ರಹಣ. ಅಷ್ಟೇ.'

'ಏನೋ ಎಲ್ಲಾ ವಿಚಿತ್ರವಾಗಿದೆ.'

ನಾನು ಅದೇ ತಾನೆ ಎಚ್ಚತ್ತು ನೀರು ಕುಡಿಯಲು ಎದ್ದೆ. ನಾನು ಎದ್ದದ್ದನ್ನು ತಿಮ್ಮಯ್ಯ ನೋಡಿದ.

'ಸ್ವಾಮಿ, ಇಲ್ಲಿ ಕೇಳಿದಿರಾ. ಗ್ರಹಗಳು ಎಷ್ಟಿವೆಯೋ ಒಂದುಸಲ ಹೇಳಿ.'

'ಒಂಬತ್ತು, ತಾತ.'

'ನಾನು ಹೇಳಲಿಲ್ಲವೆ' ಎಂದ ಸುಬ್ಬ.

'ಸ್ವಲ್ಪ ಇರಯ್ಯ, ನಿನ್ನ ಜಂಬ ಇರಲಿ. .... ಅಯ್ಯ – ಸೂರ್ಯ ಭಗವಾನ.......'

'ತಿಮ್ಮಯ್ಯ, ಮರೆತೆಯಾ? ಸೂರ್ಯ ಗ್ರಹವಲ್ಲ, ನಕ್ಷತ್ರ ಎಂದು ಹೇಳಿದ್ದೆ.'

'ಹೌದಲ್ಲವೆ. ನನ್ನ ಮತಿಯೇ ಕೆಟ್ಟುಹೋಗಿದೆ. ಇಷ್ಟು ಮರವೆ! ಏನೋ ಮುದುಕನಾದೆ....ಸೂರ್ಯ ಇರಲಿ. ಆಮೇಲೆ ಅಂಗಾರಕ, ದೇವರು ಒಳ್ಳೇದು ಮಾಡಲಿ, ಆ ಶನಿ....'

'ಗುರು ಬುಧ' ಎಂದ ಸುಬ್ಬ.

'ಅಕೋ, ಪಡುಗಡೆ ಇಳಿಯುತ್ತಿದಾರೆ ಶುಕ್ರಾಚಾರಿ. ಇನ್ನು ಯಾರು ಸ್ವಾಮಿ?'

'ವರುಣ, ಇಂದ್ರ, ಯಮ, ನಮ್ಮ ಭೂದೇವಿ.'

'ಒಂಬತ್ತೂ ಆಯಿತು. ಹಾಗಾದರೆ ರಾಹು ಕೇತುಗಳು ಇಲ್ಲದ ಹಾಗೇ.'

'ಇಲ್ಲ, ತಾತ.'

'ನಮ್ಮ ನವಗ್ರಹಗಳಲ್ಲಿ ಇಂದ್ರ ಯಮ ವರುಣರು ಇಲ್ಲವಲ್ಲ ಮೇಷ್ಟ್ರೆ?'

'ತಪ್ಪು. ನಮ್ಮ ಜ್ಯೋತಿಷಿಗಳಿಗೆ ಈ ಮೂರು ಗ್ರಹಗಳ ಪ್ರಭಾವವೂ ಗೊತ್ತು.'

ತಿಮ್ಮಯ್ಯನಿಗೆ ಇನ್ನೂ ನಂಬಿಕೆಯಾಗಲಿಲ್ಲ. ಶುಕ್ರನ ಕಡೆ ನೋಡು ತ್ತಿದಾನೆ.

'ಹಾಗಾದರೆ ಒಂಬತ್ತೇನೆ ಗ್ರಹಗಳು?'

'ಮುಖ್ಯವಾದವು, ದೊಡ್ಡವು ಇವು. ಆದರೆ ಸಣ್ಣ ಸಣ್ಣವು ಕೆಲವು ಸಾವಿರ ಇವೆ. ಇವೆಲ್ಲ ಒಂದೇ ಗುಂಪಾಗಿ, ಬೃಹಸ್ಪತಿಗೂ ಅಂಗಾರಕನಿಗೂ ನಡುವೆ ಇವೆ.'

'ಸರಿ, ಚಂದ್ರನ ಹೆಸರೇ ಬರಲಿಲ್ಲವಲ್ಲ ನಿಮ್ಮ ಗ್ರಹಗಳ ಪಟ್ಟಿಯಲ್ಲಿ?'

'ಚಂದ್ರ ಉಪಗ್ರಹ, ಭೂಮಿಯ ಸುತ್ತ ತಿರುಗುತ್ತಿದಾನೆ.'

'ಅದೇನು.... ಆತ ಈಕೆಗಿಂತ ದೊಡ್ಡವನಲ್ಲವೆ. ಈಕೆಯ ಸುತ್ತ ಪ್ರದಕ್ಷಿಣೆ ಏನು ಬಂತು ಕರ್ಮ?'

ಸುಬ್ಬ ಬಾಯಿ ಹಾಕಿದ:

'ಏನು ದೊಡ್ಡವ? ಬೃಹಸ್ಪತಿ ಶುಕ್ರರಿಗಿಂತಲೆ? ಅವರು ಸೂರ್ಯನ ಸುತ್ತಲೂ ತಿರುಗುತ್ತಿದ್ದಂತೆ ಚಂದ್ರ ಭೂಮಿಯ ಸುತ್ತ ಪ್ರದಕ್ಷಿಣೆ ಮಾಡು ತ್ತಿದಾನೆ. ಪುರಾಣ ಬೇರೆ, ಶಾಸ್ತ್ರ ಬೇರೆ.'

'ತಾತಾ, ಒಂಬತ್ತು ಗ್ರಹಗಳೂ ಸೂರ್ಯನ ಸುತ್ತ ಪ್ರದಕ್ಷಿಣೆ ಮಾಡುತ್ತಿವೆ.'

'ಸುತ್ತಲೂ ತಿರುಗುತ್ತಿವೆಯೆ?'

'ಹೂಂ ಮತ್ತೆ. ಪಡುಗಡೆಯಿಂದ ಮೂಡುಗಡೆಗೆ. ಇನ್ನೂ ವಿವರ ವಾಗಿ – ಎಡದಿಂದ ಬಲಕ್ಕೆ ಬುಗರಿಯ ಹಾಗೆ ತಿರುಗುತ್ತವೆ.' — ಸುಬ್ಬ ಹೇಳಿದ. ಇವನ ಹೈಸ್ಕೂಲು ಓದಿನಿಂದ ನನಗೆ ಅಷ್ಟು ವಿಶ್ರಾಂತಿ!

ನಾನು ಸುಮ್ಮನಿದ್ದೆ. ಸ್ವಲ್ಪ ತಡೆದು ತಿಮ್ಮಯ್ಯ ಕೇಳಿದ.

'ಬುಗರಿ ತನ್ನ ಸುತ್ತ ತಾನೇ ತಿರುಗುತ್ತದೆ. ಗ್ರಹಗಳು ಸೂರ್ಯನ ಸುತ್ತ ತಿರುಗುತ್ತವೆ. ಸಾಣೆಕಲ್ಲು ತಿರುಗಲಿಕ್ಕೂ ಗುಡಿಯ ಪ್ರದಕ್ಷಿಣೆಗೂ ಭೇದವಿಲ್ಲವೆ? ಏನು ಸ್ವಾಮಿ, ನಾ ಹೇಳಿದ್ದು ಸರಿಯೆ?'

'ಸರಿಯೆ ತಾತ. ಆದರೆ ಗ್ರಹಗಳು ತಮ್ಮ ಸುತ್ತಲೂ ತಿರುಗುತ್ತಿವೆ. ತಮ್ಮತಮ್ಮ ಸುತ್ತ ತಿರುಗುತ್ತಾ ಸೂರ್ಯನ ಪ್ರದಕ್ಷಿಣೆ ಮಾಡುತ್ತವೆ. ಬುಗರಿ ಆದ್ದರಿಂದ ಒಂದು ಸುತ್ತು ಆಡಿಸಿದರೆ ಹಾಗೇ ಆಡುತ್ತಾ ಇರುತ್ತದೆ.'

ಅಂಗಾರಕ ಬೆಳಗುತ್ತಿದಾನೆ ಬೆಳಕಿನುಂಡೆಯ ಹಾಗೆ.

'ನಮಗೆ ಈ ಅಂಗಾರಕ, ಶುಕ್ರಾಚಾರ್ಯರು ಹೀಗೆ ಗುಂಡಾಗಿ ಕಾಣಿಸುತ್ತಾರಲ್ಲ. ಉಳಿದ ಗ್ರಹಗಳೂ ಹೀಗೇ ಇವೆಯೆ?'

'ಎಲ್ಲವೂ ಹೆಚ್ಚುಕಡಮೆ ಚಂಡಿನ ಹಾಗೆ ಗುಂಡಾಗಿಯೆ ಇವೆ. ಈ ಆಕಾರಕ್ಕೆ **ಗೋಳ** ಎಂದು ಹೆಸರು. ಇವುಗಳಲ್ಲಿ ನಮ್ಮ ಭೂಗೋಳವೂ ಒಂದು.'

'ಒಂಬತ್ತು ಗ್ರಹಗಳಲ್ಲೂ ದೊಡ್ಡದು ಯಾವುದು?'

'ಬೃಹಸ್ಪತಿ. ಬುಧ ಎಲ್ಲಕ್ಕಿಂತ ಚಿಕ್ಕದು. ಒಂದಕ್ಕೊಂದು ಹೋಲಿಸಿದರೆ ಹೀಗೆ ಇವೆ. ಸುಬ್ಬ ಆ ಕಾಗದ, ಸೀಸದ ಕಡ್ಡಿ ತಾ.'

ಚಿತ್ರ ಎಳೆದೆ. (ಪು. ೨೪)

'ಮೇಷ್ಟ್ರೆ, ಬುಧನೇ ಎಲ್ಲರಿಗಿಂತ ಸೂರ್ಯನಿಗೆ ಸಮೀಪ, ಅಲ್ಲವೆ?'

'ಹೌದು. ಸೂರ್ಯನಿಗೆ ಅತಿ ದೂರವಾದ್ದು ಯಮಗ್ರಹ, ಈ ಗ್ರಹಗಳೆಲ್ಲ ಸೂರ್ಯನ ಸುತ್ತಲೂ ಹೀಗೆ ದೂರದೂರವಾಗಿ ಪ್ರದಕ್ಷಿಣೆ ಮಾಡುತ್ತಿವೆ.'

ಸೂರ್ಯಮಂಡಲದ ನಕ್ಷೆಬರೆದೆ. (ಪು. ೨೫)

'ಬುಧ, ಶುಕ್ರ, ಭೂಮಿ, ಅಂಗಾರಕ, ಇವನ್ನೂ **ಪೃಥ್ವೀ** ಗ್ರಹ ಗಳೆನ್ನುತ್ತಾರೆ. ಉಳಿದವಕ್ಕೆ **ಗುರು**ಗ್ರಹಗಳೆಂದು ಹೆಸರಿಟ್ಟಿದಾರೆ. ಇವು ಗಳ ಪ್ರದಕ್ಷಿಣ ಮಾರ್ಗಗಳು ಹೀಗಿವೆ —'

'ಮೇಷ್ಟ್ರೆ, ಈ ಪ್ರದಕ್ಷಿಣಮಾರ್ಗಗಳು ಇಷ್ಟು ಗುಂಡಗೆ ಇಲ್ಲ ವಲ್ಲವೆ?' (ಪು. ೨೬)

'ಇಲ್ಲ ಸುಬ್ಬ. ಸ್ವಲ್ಪ ಹೆಚ್ಚು ಕಡಮೆ ಸೌತೆಕಾಯಿಯ ಹಾಗೆ ಇವೆ.'

'ಈ ಗ್ರಹಗಳು ತಮ್ಮ ಸುತ್ತಲೂ ಗಿರಗಿರ ತಿರುಗುತ್ತ, ಸೂರ್ಯ ಭಗ ವಾನನ ಸುತ್ತಲೂ ಕೂಡ ಪ್ರದಕ್ಷಿಣೆ ಮಾಡುತ್ತವೆಯೋ?'

'ಹೌದು ತಾತಾ. ಒಂದೊಂದು ಗ್ರಹವೂ ತನ್ನ ಸುತ್ತ ತಾನು ಪ್ರದ ಕ್ಷಿಣೆ ಮಾಡುವ ಕಾಲಕ್ಕೆ ಒಂದು ದಿನ ಅನ್ನುತ್ತಾರೆ. ಹೀಗೆ ತಿರುಗುವು ದಕ್ಕೆ **ಭ್ರಮಣ** ಅನ್ನುತ್ತಾರೆ. ಸೂರ್ಯನ ಸುತ್ತ ಪ್ರದಕ್ಷಿಣೆಮಾಡುವ ಕಾಲ ವನ್ನು ವರ್ಷ ಅನ್ನುತ್ತಾರೆ. ಈ ತಿರುಗೋಣಕ್ಕೆ **ಭರಣ** ಅನ್ನುತ್ತಾರೆ.'

ತಿಮ್ಮಯ್ಯ ಸ್ವಲ್ಪ ಆಲೋಚಿಸಿದ.

'ಸರಿ ದೇವರು, ಒಂದುಸಲ ಹೊತ್ತು ಹುಟ್ಟಿ ಮುಳುಗಿ, ಮತ್ತೊಂದುಸಲ ಹೊತ್ತು ಹುಟ್ಟುವುದರೊಳಗಾಗಿ ನಮ್ಮ ಈ ಭೂದೇವಿ ಗಿರ್ ಎಂತ ಒಂದು ಸುತ್ತು ತಿರುಗಿದಳು ಅಂತ ಅಲ್ಲವೆ?'




**ಸೂರ್ಯನಿಗೆ ಹೋಲಿಸಿದರೆ ಇತರ ಗ್ರಹಗಳ ಪ್ರಮಾಣ ಹಸ್ತಿ ಮಶಕಾಂತರ!**

'ಅಷ್ಟೇ—ಇದು ೨೪ ಗಂಟೆಗೆ ಒಂದು ಸಲ ನಡೆಯುತ್ತದೆ.'

'ಮೇಷ್ಟ್ರೆ, ತಿಮ್ಮಯ್ಯನಿಗೆ ಅವರ ತಂದೆ ಓದು ಕಲಿಸಿದ್ದರೆ ಚೆನ್ನಾಗಿತ್ತು.'

'ಸರಿಸರಿ. ಏನು ಕಲಿಸೋದು ....ಎಲ್ಲಿಂದ ತರಬೇಕು ಅದಕ್ಕೆಲ್ಲ? ....ಏನೋ ನಿಮ್ಮಂಥ ಓದಿದವರು ಹೇಳಿದ ನಾಲ್ಕು ಮಾತು ಕಿವಿ




ಗ್ರಹಗಳು – ಬುಧ ಶುಕ್ರರು ಸೂರ್ಯನಿಗೆ ಎಷ್ಟು ಸಮೀಪವೋ !

ಯೊಳಗೆ ಹಾಕಿಕೊಂಡರೆ ಸಾಲದೇ ?....ಇರಲಿ. ವರ್ಷಕ್ಕೆಷ್ಟು ದಿನ? ನಮಗಿದ್ದಹಾಗೆ ಅವರಿಗೂ ಹನ್ನೆರಡು ತಿಂಗಳೇ ತಾನೆ ?'

'ತಿಂಗಳಿಗೆ ಸರಾಸರಿ ೩೦ ದಿನ, ವರ್ಷಕ್ಕೆ ೩೬೫ ದಿನ.'

'ಅಂದರೆ ಸೂರ್ಯನ ಸುತ್ತ ಒಂದು ಸಲ ತಿರುಗುವುದರೊಳಗಾಗಿ

ಇಷ್ಟು ಸಲ, ೩೬೫ ಸಲ, ತನ್ನ ಸುತ್ತ ತಿರುಗಬೇಕಲ್ಲವೆ ಭೂಮಿ, ಲೆಕ್ಕದ ಪ್ರಕಾರ?'

ಸುಬ್ಬ ಆಶ್ಚರ್ಯದಿಂದ ನೋಡುತ್ತಿದಾನೆ. ತಿಮ್ಮಯ್ಯ ನಿಜವಾಗಿಯೂ ಬಹಳ ಚುರುಕು. ಇವನಿಗೇ ಸರಿಯಾದ ಅವಕಾಶಗಳು ಇದ್ದಿದ್ದರೆ ಏನಾಗುತ್ತಿದ್ದನೋ! ಮಹಾಕವಿ ಹೇಳಿದ ಮಾತು ನೆನಪಾಗುತ್ತಿದೆ:

> ಅಗಾಧ ಜಲನಿಧಿಯ ಅಜ್ಞಾತತಲದಲ್ಲಿ ಎಂಥ ಅನರ್ಘ ರತ್ನ
> ಗಳಡಗಿವೆಯೋ ಯಾರು ಬಲ್ಲರು?

ಆ ರತ್ನಗಳನ್ನು ನೋಡುವವರಿಲ್ಲ, ಬಯಲಿಗೆ ತೆಗೆವವರಿಲ್ಲ. ಕರ್ಷಕ ಪ್ರಜೆಯಲ್ಲಿ ಅವಕಾಶಗಳಿಲ್ಲದೆ ತಿಮ್ಮಯ್ಯನಂಥ ರತ್ನಗಳು ದಾರಿದ್ರ್ಯಸಮುದ್ರದ ತಳದಲ್ಲಿ ಎಷ್ಟು ಬಿದ್ದಿವೆಯೋ!

ಮುಗಿಲಿನ ಕಡೆ ನೋಡುತ್ತಿದ್ದ ತಾತ ಮತ್ತೆ ಪ್ರಾರಂಭಿಸಿದ.

'ಈ ಭೂಗೋಳದ ಮೇಲೆ ಗಿಡಗೆಂಟೆ, ಬೆಟ್ಟಗುಡ್ಡ, ಹಸುಹಕ್ಕಿ ಇವೆಯಲ್ಲ. ನೀವು ಹೇಳಿದ ಹಾಗೆ ಭೂಲೋಕ ಹೀಗೆ ಗಿರ್ರೆಂತ ತಿರುಗುತ್ತಿದ್ದರೆ — ಇವೆಲ್ಲ ಬೀಳದೆ ನಿಂತಿರುವುದು ಹೇಗೆ?'




ಸೌತೆಕಾಯಿ ಆಕಾರದಲ್ಲಿ ಗ್ರಹಪಥಗಳು. ಗ್ರಹಗಳೆಲ್ಲಾ ಒಂದೇ ಮಟ್ಟದಲ್ಲಿವೆ.

'ಇದಕ್ಕೆ ಕಾರಣ ಭೂಮಿಗೆ ಇರುವ ಆಕರ್ಷಣಶಕ್ತಿ, ತಾತ' ಎಂದ ಸುಬ್ಬ.

'ಇರಯ್ಯ, ನಡುವೆ ನೀನೊಬ್ಬ ಶಿವಪೂಜೆಯಲ್ಲಿ.... ಚಿಕ್ಕ ದೊಡ್ಡ ಭೇದವೇ ಬೇಡವೆ?.... ದೇವರು —.'

'ಸುಬ್ಬ ಹೇಳಿದ್ದು ನಿಜ, ತಾತ. ನಮ್ಮ ಭೂಮಿಗೆ ಒಂದು ವಿಚಿತ್ರ ಶಕ್ತಿ ಇದೆ. ಅದನ್ನೇ **ಆಕರ್ಷಣ** ಶಕ್ತಿ ಅನ್ನುತ್ತಾರೆ. ಅಂದರೆ ತನ್ನ ಸುತ್ತಲೂ ಸ್ವಲ್ಪ ದೂರದಲ್ಲಿರುವ ಯಾವ ವಸ್ತುವನ್ನಾದರೂ ಆಗಲಿ, ಈ ಭೂ ಗ್ರಹ ತನ್ನ ಕಡೆ ಸೆಳೆದುಕೊಳ್ಳುತ್ತದೆ.'

'ಯಾವುದನ್ನಾದರೂ ಸೆಳೆದುಕೊಂಡು ಬಿಡುತ್ತದೆಯೋ?'

'ಎಲ್ಲಾ ತರದ ವಸ್ತುಗಳನ್ನೂ ಸೆಳೆದು ಬಿಡುತ್ತದೆ.'

'ಅಂದರೆ ಈ ಶಕ್ತಿಯಿಂದ ಭೂಗೋಳ ನಮ್ಮನ್ನು ಹೀಗೆ ಹಿಡಿದು ನಿಲ್ಲಿಸುತ್ತಾ ಇದೆ ಎಂತಲೇ?'

'ಹೌದು. ಈ ಶಕ್ತಿ ಭೂಮಿಗೊಂದಕ್ಕೇ ಅಲ್ಲ. ಎಲ್ಲಾ ಗ್ರಹಗಳಿಗೇ ಅಲ್ಲ, ನಕ್ಷತ್ರಗಳಿಗೂ ಇದೆ. ಖಗೋಳದಲ್ಲಿರುವ ಎಲ್ಲಾ ಗೋಳಗಳಿಗೂ ಈ ಶಕ್ತಿ ಇದೆ.'

'ಮೇಷ್ಟ್ರೆ, ಉತ್ತರ ದಕ್ಷಿಣ ಧ್ರುವಗಳು ಗ್ರಹಗಳಿಗೆಲ್ಲಾ ಇವೆಯೆ?

'ಎಲ್ಲಾ ಗ್ರಹಗಳಿಗೂ ಇವೆ, ಸುಬ್ಬ.'

'ಅವೆಂಥವು ಸ್ವಾಮಿ, ಅವು?'

'ನಮ್ಮ ಗ್ರಹಗಳು ಸೂರ್ಯನ ಸುತ್ತಲೂ ಪ್ರದಕ್ಷಿಣೆ ಮಾಡುತ್ತಿಲ್ಲವೆ. ಅದರಲ್ಲಿ ಒಂದು ವಿಚಿತ್ರ ಕೆಲಸ ಮಾಡುತ್ತಿವೆ. ಪ್ರತಿಯೊಂದು ಗ್ರಹವೂ ಸುಮ ಸುಮಾರು ಚೆಂಡಿನ ಆಕಾರವಾಗಿ ಇದೆ. ಈ ಚೆಂಡಿನಲ್ಲಿ ಸದಾ ಒಂದು ಕೊನೆ ಉತ್ತರ ದಿಕ್ಕಿಗೆ ತಿರುಗಿ, ಧ್ರುವ ನಕ್ಷತ್ರದ ಕಡೆ ನೋಡುತ್ತಾ ಇರುತ್ತದೆ.... ಪ್ರತಿಯೊಂದು ಗ್ರಹವೂ ತನ್ನ ಸುತ್ತ ತಾನು ಪ್ರದಕ್ಷಿಣೆ ಮಾಡುತ್ತಾ ಸೂರ್ಯನ ಸುತ್ತಲೂ ತಿರುಗುತ್ತಾ.... ಇಷ್ಟೆಲ್ಲಾ ಮಾಡುತ್ತಾ, ಉತ್ತರ

ದಿಕ್ಕಿಗೆ ತಿರುಗಿಕೊಂಡು, ಒಂದು ಕೊಂಬಿನಿಂದ ಹೀಗೆ ಧ್ರುವನನ್ನು ನೋಡುತ್ತಲೇ ಇರುತ್ತದೆ. ಈ ಕೊಂಬಿಗೇ **ಉತ್ತರ ಧ್ರುವ** ಎಂದು ಹೆಸರು. ಎರಡನೆ ತುದಿಗೆ **ದಕ್ಷಿಣ ಧ್ರುವ** ಎಂದು ಹೆಸರು.'

'ನಮ್ಮ ಈ ಸೂರ್ಯ ಒಂದು ನಕ್ಷತ್ರ....ಖಗೋಳದಲ್ಲಿ ಇಷ್ಟಕ್ಕಿಂತ ದೊಡ್ಡವು ಬಹಳ ಇವೆ ಎಂದಿರಲ್ಲ. ಗ್ರಹಗಳೆಲ್ಲಾ ಈತನ ಸುತ್ತಲೂ ತಿರುಗಿದ ಹಾಗೆ, ಈತನೂ ತನಗಿಂತ ದೊಡ್ಡದಾದ ನಕ್ಷತ್ರ ಯಾವುದಾದರೂ ಒಂದರ ಸುತ್ತಲೂ ತಿರುಗುತ್ತಾ ಇರಬಾರದೆ, ಮೇಷ್ಟ್ರೆ ?'.

'ಹಾಗೇ ನಡೆಯುತ್ತಾ ಇದೆ. ನಮ್ಮ ಸೂರ್ಯ, ಈ ಗ್ರಹಗಳು, ಈ ಸೂರ್ಯಮಂಡಲವೆಲ್ಲವೂ ನಮ್ಮ ಪ್ರಪಂಚದಲ್ಲಿ **ಧನುಸ್ಸು** ಎಂಬ ನಕ್ಷತ್ರ ರಾಶಿಗೆ ಇದಿರಾಗಿ ಸುತ್ತಲೂ ತಿರುಗುತ್ತಿದೆ ಸುಬ್ಬ. ಕ್ಷಣಕ್ಕೆ ೧೭೦ ಮೈಲಿ ವೇಗದಿಂದ, ೨೨ ೧|೨ ಕೋಟಿ ವರ್ಷಗಳಲ್ಲಿ ಒಂದು ಪ್ರದಕ್ಷಿಣೆ ಪೂರ್ತಿ ಮಾಡುತ್ತದೆ.'

'ಕೇಳುತ್ತಾ ಇದ್ದ ಹಾಗೆ ಮತಿಯೇ ಹಾರಿಹೋಗುತ್ತದೆ. ಈ ಗ್ರಹಗಳೆಲ್ಲಾ ೩೬೫ ದಿನಗಳಿಗೆ ಒಂದು ಸಲ ಸುತ್ತಿ ಬರುತ್ತವೆಯೇ ?'

'ಇಲ್ಲ, ತಾತ. ಅದು ಭೂಗೋಳದ ಲೆಕ್ಕ ಮಾತ್ರ. ಅಂಗಾರಕ ಒಬ್ಬನಿಗೆ ಸುಮಾರ ಭೂಮಿಗೆ ಹಿಡಿದಷ್ಟೇ ಕಾಲ ಹಿಡಿಯುತ್ತದೆ ಪ್ರದಕ್ಷಿಣೆಗೆ. ಶನೇಶ್ವರ ೮೪ ವರ್ಷಕ್ಕೊಂದು ಸಲ ಪ್ರದಕ್ಷಿಣೆ ಮಾಡುತ್ತಾನೆ. ಯಮನ ಪ್ರದಕ್ಷಿಣಾ ಕಾಲ ೨೮೭ ವರ್ಷ !'

'ಯಮನ ಸಮಾಚಾರ ಯಮಬಾಬತೇ !'

'ವರ್ಷಗಳೇ ಅಲ್ಲ, ತಾತ. ದಿನಗಳಲ್ಲೂ ಈ ಭೇದ ಇದೆ.'

ತಾಲ್ಲೂಕು ಕಛೇರಿಯಲ್ಲಿ ೧೧ ಗಂಟೆ ಆಯಿತು.

'ಬರ್‍ತೀನಿ ಸ್ವಾಮಿ, ಹೊತ್ತಾಯಿತು....ಏನೋ ಕಾಲಕ್ಷೇಪವಾಯಿತು....ಆದರೆ ನಿಮಗೆ ನಿದ್ದೆ ಕೆಟ್ಟಿತು....ಮಲಗಿಕೊಳ್ಳಿ' ಎನ್ನುತ್ತ ಕೋಲೂರಿ ನಡೆದ.

ಸುಬ್ಬ ಅಂದ : 'ಈ ದ್ವೀಪದಲ್ಲಿ ನಮ್ಮ ಸೂರ್ಯಕುಟುಂಬ ಒಂದು ಚಿಕ್ಕ ಪಟ್ಟಣ ಆಗಬಹುದಲ್ಲವೆ, ಮೇಷ್ಟ್ರೆ ?'

ತಿಮ್ಮಯ್ಯ ತಾತನಿಗೆ ಆ ಮಾತು ಕೇಳಿಸಿತು. ಹಿಂದಕ್ಕೆ ತಿರುಗಿ 'ಸರಿಯಾದ ಮಾತು ಹೇಳಿದೆ, ಮಗೂ' ಎಂದ.



೪

## ಪಟ್ಟಣದ ಅರಸ — ಸೂರ್ಯ

‘ ಕರ್ಮಸಾಕ್ಷೀ ಜಗಚ್ಚಕ್ಷು ರಂಶುಮಾಲೀ ತ್ರಯೀತನು : !
ಪ್ರದ್ಯೋತನೋ ದಿನಮಣಿ : ಖದ್ಯೋತೋ ಲೋಕಬಾಂಧವ : || ’

‘ ಏ, ಮುಠ್ಠಾಳ! ಪ್ರದ್ಯೋತನೋ – ಎಂದಾಗ ಗಂಟಲು ಏರಿಸಬೇಕು. ದಿನಮಣಿ – ಅಂದಾಗ ಕೆಳಗಿನ ಸ್ಥಾಯಿ. ಖದ್ಯೋತೋ – ಮತ್ತೆ ಏರು. ಲೋಕಬಾಂಧವ–ಉಸಿರುಬಿಟ್ಟು ತೇಲಿಸಿಬಿಡು. ಉಸಿರಿಲ್ಲಾ? ಏನು ಹುಟ್ಟಿದಿರೋ ಹೆಣದತ್ತರು ?.... ಊಂ. ಇನ್ನೊಂದು ಸಲ ಒದರು ?

ನೆರೆಮನೆ ಆಚಾರ್ರು ಅಭಿನಯಿಸುತ್ತಾ ಮಗನಿಗೆ ಪಾಠ ಹೇಳುತ್ತಿದಾರೆ. ಬೆಳಗಿನ ಜಾವ ಐದು ಗಂಟೆ ಆಗಿದೆ. ಸುಬ್ಬ ಪಡಸಾಲೆಯಲ್ಲಿ ಓದುತ್ತಿದಾನೆ. ನಾನೂ ತಿಮ್ಮಯ್ಯ ಬೆಂಕಿ ಕಾಯಿಸಿಕೊಳ್ಳುತ್ತಿದೇವೆ.

‘ ಸ್ವಾಮಿ, ಅವರು ಓದಿಸುತಾ ಇರೋದು ಏನು ವಿಷಯ ? ’

‘ ಅದು ಅಮರಕೋಶ. ಅದು ಪೂರಾ ಬಾಯಿಪಾಠವಾದರೇನೇ ಸಂಸ್ಕೃತ ಬಂದ ಹಾಗೆ .... ಆ ಹುಡುಗ ಸೂರ್ಯನ ಹೆಸರುಗಳನ್ನು ಬಾಯಿಪಾಠ ಮಾಡುತ್ತಿದಾನೆ.’

‘ ಅದರ ಅರ್ಥವೇನೋ ಹೇಳುತೀರಾ ಸ್ವಲ್ಪ ? ’

‘ ಈ ಸೂರ್ಯ ನಾವು ಮಾಡುವ ಕೆಲಸಕ್ಕೆಲ್ಲಾ ಸಾಕ್ಷಿ. ಹಗಲಿನ ರತ್ನ. ಲೋಕಕ್ಕೆಲ್ಲಾ ಬಂಧು – ಹೀಗೆ ಬಗೆಬಗೆಯಾಗಿ ಆತನ ಗುಣಗಳನ್ನು ವರ್ಣಿಸಿ ಆತನಿಗೆ ಹೆಸರುಗಳನ್ನು ಇಟ್ಟಿದಾರೆ ನಮ್ಮ ಆರ್ಯರು.’

ಹುಬ್ಬು ಹಾರಿಸುತ್ತ ತಿಮ್ಮಯ್ಯ ಹೇಳಿದ :

‘ ಅಷ್ಟು ದೊಡ್ಡವನು ಅಂದ ಹಾಗೆ. ಹೂಂ; ಸೂರ್ಯ ಭಗವಾನ್ –

ಎಂದು ಸುಮ್ಮನೆ ಹೇಳಿನರೆ, ಹಿರಿಯರು! ವಿಷ್ಣು, ನಾರಾಯಣ ಅಂತ ಕೂಡ ಕರೆಯುತ್ತಿದ್ದರಂತೆ. ....ಆಚಾರ್ರು ಹೇಳುತ್ತಿದ್ದರು. ನಮ್ಮ ಪೂರ್ವಿಕರು ಹೀಗೆ ಈತನನ್ನು ಹೊಗಳಿ, ಬೆಳಗ್ಗೆ ಎದ್ದು ಈತನಿಗೆ ನಮಸ್ಕಾರ ಹಾಕು ಎಂದು ಹೇಳಿದರಲ್ಲ – ನಿಮ್ಮ ಶಾಸ್ತ್ರಿಗಳು ಕಡೆಗೆ ಈತ ಗ್ರಹವೂ ಅಲ್ಲ, ಬರೀ ನಕ್ಷತ್ರ ಎಂದು ಬಿಟ್ಟರಲ್ಲ. ಅವರ ಕಣ್ಣಿಗೆ ಈತ ದೊಡ್ಡವನಾಗಿ ಕಾಣಲಿಲ್ಲವೆ?'

'ಶಾಸ್ತ್ರ ಸೂರ್ಯನನ್ನು ಹಗುರಮಾಡಿಲ್ಲ, ತಾತ. ಸೂರ್ಯ ಬಹಳ ದೊಡ್ಡವನು ಎಂದೇ ಹೇಳುತ್ತದೆ. ಆದರೆ ನಮಗೂ ಈ ಬಿಳಿಯುವರಿಗೂ ಒಂದು ಭೇದವಿದೆ. ಎಲ್ಲಾದರು ದೊಡ್ಡತನ ಇದ್ದರೆ ಅದನ್ನು ಮೆಚ್ಚಿ, ಮರ್ಯಾದೆ ಮಾಡಿ, ಪೂಜಿಸುವುದು ನಮ್ಮ ಆಚಾರ. ಪರಂಗಿಯುವರು ಹಾಗಲ್ಲ. ಪ್ರಕೃತಿಯಲ್ಲಿ ಏನಾದರೂ ಶಕ್ತಿಯಿತ್ತೋ ಅದು ಮನುಷ್ಯನಿಗೆ ಹೇಗೆ ಉಪಯೋಗವಾಗುತ್ತದೆ ಎಂದು ಆಲೋಚಿಸುತ್ತಾರೆ. ಸೂರ್ಯನ ಹಿರಿತನವನ್ನು ಈ ಶಾಸ್ತ್ರಜ್ಞರೂ ತಿಳಿದುಕೊಂಡಿದಾರೆ; ತಿಳಿಯದೆ ಇಲ್ಲ. ನಮ್ಮ ಗ್ರಹಗಳ ಹುಟ್ಟಿಗೆ ಈತನೇ ಕಾರಣವೆಂದೂ ಈತನಿಂದ ನಮಗೆ ನಾನಾ ಬಗೆಯ ಉಪಕಾರವುಂಟೆಂದೂ ತಿಳಿದುಕೊಂಡಿದಾರೆ.

'ಹೌದು, ಹಿಂದೆ ನಮ್ಮ ಭೂಮಿ ಉಳಿದ ಗ್ರಹಗಳು ಎಲ್ಲಾ ಸೂರ್ಯನೊಳಗಿಂದ ಹುಟ್ಟಿ ಬಂದವು ಎಂದಿದ್ದಿರಿ. ಎಲ್ಲಿ ಆ ಕಥೆ ಹೇಳುತ್ತೀರಾ?'

ಸೂರ್ಯಮಂಡಲದ ಬಗ್ಗೆ ಎಷ್ಟೋ ಸಿದ್ಧಾಂತಗಳಿವೆ. ಆದರೂ ಎಲ್ಲ ಶಾಸ್ತ್ರಜ್ಞರೂ ಒಪ್ಪಿಕೊಂಡ ಕೆಲವು ಸಂಗತಿಗಳನ್ನು ಚುಟಕಾದಲ್ಲಿ ಹಿಂಡಿ ಹೇಳತೊಡಗಿದೆ.

'ತಾತಾ, ಮುನ್ನೂರು ಕೋಟಿ ವರ್ಷಗಳ ಹಿಂದೆ ಒಂದು ವಿಚಿತ್ರ ನಡೆಯಿತು.'

ಪಡಶಾಲೆಯಲ್ಲಿ ಸುಬ್ಬನ ಧ್ಯಾನವೆಲ್ಲ ಇಲ್ಲೇ ಇದೆ. 'ಎಷ್ಟು ಕಾಲದ ಹಿಂದೆ, ಮೇಷ್ಟ್ರೆ?' ಎಂದ.

'ಈ ಕಡೆ ಬಾರಯ್ಯ ಸ್ವಾಮಿ, ಇರಲಿ ಬಾ, ನಿನ್ನ ಓದು, ಅದೇ ತಾನೆ ಕುಲಗೆಟ್ಟ ಓದು! ಬಾ.'

ಸುಬ್ಬ ಬೆಂಕಿಯ ಬಳಿಗೆ ಬಂದ. ಬರುತ್ತಾ ಒಂದು ಸಳುಕು ಎಸೆದ.

'ಈಗ ನೀನು ಕೇಳುತ್ತಾ ಇರುವುದೆಲ್ಲ ಕುಲಗೆಟ್ಟ ಓದೇ ಅಲ್ಲವೆ?'

'ಅಬ್ಬಬ್ಬ, ಏನು ಗಂಡಸುತನವಪ್ಪಾ! ಸುಮ್ಮನೆ ಕಣ್ಣು ಇಂಗಿ ಹೋಗೋ ಹಾಗೆ ಓದೋದಕ್ಕಿಂತ ಕಿವಿಯಾರೆ ಕೇಳೋದೇ ಮೇಲು. ನಿನಗೇನು ಗೊತ್ತು? ........ಹೂಂ, ಮುಂದೆ ಸಾಗಲಿ ಸ್ವಾಮಿ.'

ಮತ್ತೆ ಮೊದಲಿಟ್ಟೆ.

'ಮುನ್ನೂರು ಕೋಟಿ ವರ್ಷದ ಹಿಂದೆಯೋ ಇನ್ನೂ ಮೊದಲೋ ಈ ಖಗೋಳ ವೀಧಿಯಲ್ಲಿ ಒಂದು ವಿಚಿತ್ರ ನಡೆಯಿತು.'

ಇಬ್ಬರೂ ಕಿವಿ ನಿಗರಿಸಿ ಕೇಳುತ್ತಿದಾರೆ.

'....ಆವೊತ್ತು ಸೂರ್ಯನಿಂದ ಸ್ವಲ್ಪ ಭಾಗ ಬೇರೆ ಸಿಡಿದು ಖಗೋಳದಲ್ಲಿ ಬಿದ್ದು ಹೋಯಿತು.'

'ಯಾಕೆ ಬಿತ್ತು?'

'ಅಬ್ಬ! ಮಹತ್ತರ ವಿಷಯವನ್ನೇ ಕೇಳಿದ. ಇದು ಇವೊತ್ತಿಗೂ ಶಾಸ್ತ್ರಜ್ಞರ ಬುದ್ಧಿಯನ್ನು ಪರೀಕ್ಷಿಸುತ್ತಿರುವ ವಿಷಯ.

'....ಬಹಳ ಸಿದ್ಧಾಂತಗಳಿವೆ, ತಾತ. ಇವುಗಳಲ್ಲಿ ಯಾವುದೂ ಎಲ್ಲಾ ಶಾಸ್ತ್ರಿಗೂ ಒಪ್ಪಿಗೆಯಾಗಿಲ್ಲ. ಎಲ್ಲ ಸಮಸ್ಯೆಗಳಿಗೂ ಸರಿಯಾದ ಸಮಾಧಾನ ಸಿಕ್ಕಿಲ್ಲ. ಆದರೂ ಶಾಸ್ತ್ರಜ್ಞರು ಹೀಗನ್ನುತ್ತಿದಾರೆ.

ಆ ಸಮಯಕ್ಕೆ ಯಾವುದೋ ಒಂದು ನಕ್ಷತ್ರ, ನಮ್ಮ ಸೂರ್ಯನಿಗಿಂತ ಎಷ್ಟೋ ದೊಡ್ಡದು, ಬಲವಾದ್ದು, ಹೆಚ್ಚು ಆಕರ್ಷಣಶಕ್ತಿ ಇದ್ದದ್ದು, ಖಗೋಳದಲ್ಲಿ ದಾರಿತಪ್ಪಿ ಹೋಗಿರಬೇಕು. ಕೆಲವು ಕ್ಷಣಕಾಲ ಸೂರ್ಯನಿಗೆ ಹತ್ತಿರ ಹಠಾತ್ತಾಗಿ ಬಂದಿರಬೇಕು.'

'ಈ ದೊಡ್ಡ ನಕ್ಷತ್ರ ಸೂರ್ಯನಿಗಿಂತ ದೊಡ್ಡದಾದ್ದರಿಂದ ಸೂರ್ಯನನ್ನು ಆಕರ್ಷಿಸಿರಬೇಕು ಅನ್ನುತ್ತೀರಾ ಮೇಷ್ಟ್ರೆ?'

'ಹಾಗೆಂದೇ ಶಾಸ್ತ್ರಜ್ಞರ ಅಭಿಪ್ರಾಯ.'

'ಬಿಡಿಸಿ ಹೇಳಬೇಕು ದೇವರು ವಿವರವಾಗಿ.'

ನೆಲದ ಮೇಲೆ ಚಿತ್ರ ಗೀಚಿದೆ.




ಸೂರ್ಯನಿಂದ ಗ್ರಹಗಳ ಹುಟ್ಟು

'ಏನೂ ಇಲ್ಲ ತಾತ. ಈ ಖಗೋಳಗಳಿಗೆಲ್ಲ ಆಕರ್ಷಣ ಶಕ್ತಿ ಇದೆಯೆಂತ ಹೇಳಿರಲಿಲ್ಲವೆ. ಇಂಥ ಗೋಳಗಳಲ್ಲಿ ಒಂದು ದೊಡ್ಡ ಗೋಳ, ಒಂದು ದೊಡ್ಡ ನಕ್ಷತ್ರ, – ಇಕೊ ಈ ಚಿತ್ರದಲ್ಲಿ ನೋಡು– ೩೦೦ ಕೋಟಿ ವರ್ಷಗಳ ಹಿಂದೆ ದಾರಿತಪ್ಪಿ ಸೂರ್ಯನ ಬಳಿಗೆ ಬಂತು. ಸೂರ್ಯನಿಗಿಂತ ದೊಡ್ಡದು ಆದ್ದರಿಂದ ಸೂರ್ಯನನ್ನೆ ತನ್ನ ಕಡೆ ಸಳೆಯಿತು. ಆಗ ಸೂರ್ಯಗೋಳದ ಮೇಲ್ಭಾಗದಿಂದ ವಾಯು ಪದಾರ್ಥಗಳು ಹಾರಿಹೋಗಿರಬೇಕು ..:...... ಹೀಗೆ ....'

'ಚಂದ್ರ ಹುಟ್ಟಿದರೆ ಸಮುದ್ರದ ನೀರು ಉಕ್ಕುವ ಹಾಗೆಯೆ, ಮೇಷ್ಟ್ರೆ ?'

'ಹೌದು, ಹಾಗೆಯೇ.'

'ಹಾಗೆಯೇ, ಚಂದ್ರನ ಸೆಳೆತಕ್ಕೆ ಸಮುದ್ರ ಹಾಗೆ ಉಕ್ಕುತ್ತದೆಯೆ? ನಮ್ಮವರು ಚಂದ್ರ ಸಮುದ್ರನ ಮಗ ಎಂದರು. ಏನೋ ಈ ತೊಡಕು. ಹೂಂ, ಕಥೆ ಸಾಗಲಿ ಮತ್ತೆ.'

'ಸೂರ್ಯಗೋಳದಿಂದ ಹೀಗೆ ಸಿಡಿದು ಹೊರಗೆ ಬಂದ ಪದಾರ್ಥ ಉಂಡೆ ಉಂಡೆಯಾಗಿ ಬಿಡಿಬಿಡಿಯಾಯಿತು. ಈ ಉಂಡೆಗಳು ಮೊದಲಿ

ನಿಂದಲೂ ಗಿರಗಿರ ತಿರುಗುತ್ತಲೇ ಇವೆ. ವಾಯು ಪದಾರ್ಥಗಳು ಗಿರಗಿರ ತಿರುಗಿದರೆ ಕೆಲವು ಕಾಲದ ಮೇಲೆ ಗುಂಡಾದ ಗೋಳಗಳಾಗುತ್ತವೆ. ಮೊದಲೇ ಹೇಳಿದೇನೆ. ಖಗೋಳದಲ್ಲಿ ಬಂದು ಬಿದ್ದ ವಾಯು ಪದಾರ್ಥಗಳು ಹಾಗೆ ಗಿರಗಿರ ತಿರುಗಿ, ಕಟ್ಟಕಡೆಗೆ ಈಗ ನಾವು ನೋಡುತ್ತಿರುವ ಗ್ರಹಗಳಾಗಿ ಹೋದವು. ಇವುಗಳಲ್ಲಿ ಕೆಲವು ಆರಿ ತಣ್ಣಗೆ ಆದವು. ವಾಯುಪದಾರ್ಥ ತಣ್ಣಗಾದರೆ ಗಟ್ಟಿಯಾಗಿ ಘನಪದಾರ್ಥವಾಗುತ್ತದೆ. ಆವಿ ತಂಪಾದರೆ ನೀರಾಗಿ ಕಡೆಗೆ ಮಂಜಿನಗಡ್ಡೆಯಾಗದೆ? .... ಹಾಗೇ ....'

'ಇದಕ್ಕೆ ಪ್ರಮಾಣವೇನು ಮೇಷ್ಟ್ರೆ?'

ಭೇಷ್! ಶಿಷ್ಯರೆಂದರೆ ಹೀಗಿರಬೇಕು. ಎಲುಬನ್ನೂ ಕಡಿಯುವ ಜಾತಿ. ಆದರೂ ಸಹನೆಯಿಂದ ಪ್ರಾರಂಭಿಸಿದೆ:

'ತಾಳ್ಮೆಯಿಂದ ಕೇಳಬೇಕು. ಮೊದಲನೆಯದು— ಈ ಗ್ರಹಗಳಲ್ಲಿರುವ ಮುಖ್ಯ ಪದಾರ್ಥಗಳೆಲ್ಲ ಸೂರ್ಯನಲ್ಲಿ ಇವೆ. ಭೂಗೋಳದಲ್ಲಿ ೯೨ **ಮೂಲಪದಾರ್ಥ**ಗಳು ಇವೆ. ಇವರಲ್ಲಿನ ೬೬ ಮೂಲಪದಾರ್ಥ ಸೂರ್ಯ ಗೋಳದಲ್ಲಿ ಈಗ ಕಂಡಿವೆ. ಇನ್ನೂ ಹೊಸ ಹೊಸವು ದಿನವೂ ಕಾಣುತ್ತಲೇ ಇವೆ. ಉಳಿದ ಗ್ರಹಗಳಲ್ಲೂ ಈ ಮೂಲಪದಾರ್ಥಗಳು ಇವೆ. ಕಿರಣ ಭೇದಿನಿಯ ದ್ವಾರ ಈ ಮೂಲಪದಾರ್ಥಗಳ ಸಂಗತಿಯನ್ನು ತಿಳಿದುಕೊಂಡಿದಾರೆ. ಉದಾಹರಣೆಗೆ— ಎಲ್ಲಾ ಗ್ರಹಗಳಲ್ಲೂ ಕಬ್ಬಿಣ ಇದೆ. ಸೂರ್ಯನಲ್ಲೂ ಇದೆ. ಆದ್ದರಿಂದ ಈ ಗ್ರಹಗಳು ಸೂರ್ಯನೊಳಗಿಂದ ಹುಟ್ಟಿರಬೇಕು.

ಎರಡನೆಯ ಪ್ರಮಾಣ — ಭೂಮಿ ಅಂಗಾರಕ ಎರಡು ವಿನಾ ಉಳಿದ ಗ್ರಹಗಳೆಲ್ಲ ವಾಯುದಶೆಯಲ್ಲಿ, ದ್ರವದಶೆಯಲ್ಲಿ ಇವೆ. ಆದ್ದರಿಂದ ವಾಯುದಶೆಯಿಂದ ಘನದಶೆಗೆ ತಿರುಗುವ ಅವಕಾಶವಿದೆ ಎಂದ ಹಾಗಾಯಿತು. ವಾಸ್ತವವಾಗಿ ಕೆಲವು ಗ್ರಹಗಳು ತಣ್ಣಗಾಗಿ ಗಡ್ಡೆ ಕಟ್ಟಿದ್ದು ಕೂಡ ಸ್ವಲ್ಪ ಕಾಣುತ್ತಿದೆ.

ಮೂರನೆಯದು— ಗ್ರಹಗಳೆಲ್ಲಾ ಒಂದೇ ಸಿಟ್ಟಿನಲ್ಲಿ ಪಡುಗಡೆಯಿಂದ ಮೂಡುಗಡೆಗೆ ತಿರುಗುತ್ತವೆ. ಇನ್ನೊಂದು ವಿಶೇಷ – ಎಲ್ಲವೂ ಖಗೋಳ ದಲ್ಲಿ ಒಂದೇ ಮಟ್ಟದಲ್ಲಿವೆ. ಸೂರ್ಯಬಿಂಬದ ಮಧ್ಯದಿಂದ ಒಂದು ದಾರವನ್ನು ತೂರಿಸಿ ಎಳೆದರೆ ಆ ದಾರ ಎಲ್ಲಾ ಗ್ರಹಗಳ ಮಧ್ಯಭಾಗದಲ್ಲಿ ಸರಾಗ

ವಾಗಿ ತೂರಿಬರುತ್ತದೆ. ಇವೆಲ್ಲವನ್ನೂ ಒಂದು ಸರವಾಗಿ ಪೋಣಿಸಬಹುದು. ಎಲ್ಲಾ ಒಂದೇ ಮಟ್ಟದಲ್ಲಿವೆ. ಈ ಸಿದ್ಧಾಂತಕ್ಕೆ ಪ್ರಮಾಣಗಳಿವೆ.'

ಬೆಂಕಿಯ ಶಾಖಕ್ಕೆ ತಡೆಯಲಾರದೆ ಸುಬ್ಬ ಸ್ವಲ್ಪ ಹಿಂದೆ ಸರಿದ.

'ಏನು ಸ್ವಾಮಿ, ಚರ್ಮ ಸೀದು ಹೋಯಿತೇ? ನಮ್ಮ ಪ್ರಾಣಕ್ಕೆ ಇದೇ ಹೀಗಿದೆಯಲ್ಲ. ಆ ಸೂರ್ಯನ ಹತ್ತಿರ ಇವು ಹೇಗಿವೆಯೋ? ಅದಿರಲಿ ದೇವರು, ಈತ ಹೀಗೆ ಉರಿತಿದಾನಲ್ಲ. ಯಾಕೋ?'

'ಈತನಲ್ಲಿ ಮೂಲಪದಾರ್ಥಗಳು ವಾಯು ದಶೆಯಲ್ಲಿವೆ. ಕೆಲವು ಅದಕ್ಕೂ ಮೀರಿದ ಪರಮಾಣು ದಶೆಯಲ್ಲಿವೆ.'

'ಅಂದರೆ ಏನು?'

'ಪ್ರತಿ ಪದಾರ್ಥಕ್ಕೂ ಅಣುಗಳು ಅಂತ ಇವೆ, ತಾತ. ಆ ಅಣುಗಳು ಸೇರಿದರೇನೇ ಪದಾರ್ಥ ಏರ್ಪಡುವುದು. ನಮಗೆ ಕಾಣಿಸುವ ಪದಾರ್ಥಗಳಲ್ಲಿ ಮುಕ್ಕಾಲುಪಾಲು ಇಂಥಾವೇ. ಮಂಜಿನಗಡ್ಡೆಯಂಥವು ಅನ್ನು.... ಇವು ಸ್ವಲ್ಪ ಬಿಡಿ ಬಿಡಿಯಾಗಿ ಇದ್ದರೆ ದ್ರವ ಪದಾರ್ಥಗಳು ಹುಟ್ಟುತ್ತವೆ — ನೀರಿನಂತೆ. ಈ ಅಣುಗಳು ಬಿಡಿ ಬಿಡಿಯಾಗಿ ಒಂದರಿಂದ ಒಂದು ಬೇರೆಯಾಗಿ ಇದ್ದರೆ ಅದು ವಾಯುದಶೆ; ನೀರಿನ ಆವಿಯ ಹಾಗೆ. ಈ ಮೂರೂ ದಶೆಗಳು ನಮಗೆ ಭೂಗೋಳದಲ್ಲಿ ಕಾಣಿಸುತ್ತಿವೆ. ಆದರೆ ಸೂರ್ಯನಲ್ಲೂ ನಕ್ಷತ್ರಗಳಲ್ಲೂ ಪದಾರ್ಥಗಳು ವಾಯುದಶೆಯನ್ನು ಮೀರಿವೆ.'

ಶ್ರದ್ಧೆಯಿಂದ ಕೇಳುತ್ತಿದಾರೆ. ಆದರೆ ನನ್ನ ತೃಪ್ತಿಗಾಗಿ ಉಪಮಾನ ರೂಪದಿಂದ ಮತ್ತೆ ಮೊದಲು ಮಾಡಿದೆ. ಈ ಶಾಸ್ತ್ರಗಳು ವಿದೇಶದಲ್ಲಿ ಹುಟ್ಟಿದವು. ಈ ವಿಜಾತೀಯ ಸಿದ್ಧಾಂತಗಳಿಗೆ ಕೇವಲ ವ್ಯತಿರೇಕವಾದ ಪುರಾಣ ಕತೆಗಳಲ್ಲಿ ನಂಬಿಗೆ ಇರುವ ಈ ದೇಶದ ಪ್ರಜೆಗಳಿಗೆ ಈ ವಿಷಯವನ್ನು ಬೋಧಿಸುವುದು ಕಷ್ಟ. ಅಂತೂ ಪ್ರಯತ್ನಿಸುವುದು ಪ್ರತಿಯೊಬ್ಬ ವಿದ್ಯಾವಂತನ ಕರ್ತವ್ಯ. ಮೊದಲಿಟ್ಟೆ.

'ಅರಳೆ ಹಂಜಿ ಇದೆ ಎನ್ನಿ. ಇದು ಘನದಶೆ ಎನ್ನೋಣ. ಆ ಹಂಜಿಯನ್ನು ಹಿಂಜಿ ಎಳೆಎಳೆಯಾಗಿ ಬಿಡಿಸಿ ತೆಳ್ಳಗೆ ಮಾಡೋಣ. ಈ ಹಿಂಜಿದ ಅರಳೆಯನ್ನು ದ್ರವದಶೆ ಎನ್ನಬಹುದು. ಇದನ್ನು ಅರಳೆ ಹಿಂಜುವ ಬಿಲ್ಲಿನಿಂದ ಹೊಡೆದರೆ ಏನಾಗುತ್ತದೆ? ಅರಳೆ ತೊಳೆತೊಳೆಯಾಗಿ ಎಳೆಎಳೆ

ಯಾಗಿ ಚದರಿ ಗಾಳಿಗೆ ಹಾರಿಹೋಗುತ್ತದೆ. ಅದೇ ವಾಯುದಶೆ. ಇನ್ನೂ ಚೆನ್ನಾಗಿ ಪಿಂಜಾರನ ಬಿಲ್ಲಿನಂತೆ ಜೋರಾಗಿ ಹಿಂಜಿದರೆ ಆ ಹಂಜಿ ಹಿಂಜಿ ಕೊಂಡು ಗಾಳಿಯ ಹಾಗೆ ಆಗಿ, ಒಂದು ಎಳೆ ಇನ್ನೊಂದಕ್ಕೆ ಅಂಟಿಕೊಳ್ಳದಂತೆ ಬಿಡಿ ಬಿಡಿಯಾಗಿ ದೂರ ದೂರವಾಗಿ ಹಾರಿಹೋಗುತ್ತವೆ. ಎಲ್ಲವೂ ಬಿಡಿ ಬಿಡಿ ಎಳೆ. ಅದನ್ನೇ **ಪರಮಾಣು** ದಶೆ ಎನ್ನಬಹುದು. ವಸ್ತುಗಳ ಸ್ವರೂಪ ಹೀಗೆ ಇರುತ್ತದೆ ಎನ್ನಬಹುದು '

'ಅಂದರೆ ಸೂರ್ಯನೊಳಗೆ ಅನೇಕ ವಸ್ತುಗಳು ಈ ಸ್ಥಿತಿಯಲ್ಲಿವೆ ಅಂತಲೇ ? '

' ಇವೆ. ಒಂದು ಮಾತು–ಪದಾರ್ಥಗಳು ವಾಯುದಶೆಯಲ್ಲಿ ಇರಲಿಕ್ಕೆ ಸಾಧಾರಣವಾಗಿ ಕಾವು ಬೇಕು. ಪರಮಾಣುದಶೆಯಲ್ಲಿ, ವಾಯುದಶೆಗಿಂತ ಕಾವು ಹೆಚ್ಚು. ಅಣುಗಳು ಬಿಡಿ ಬಿಡಿಯಾಗಿ ಹೋಗುವುದರಿಂದಲೇ ಈ ಕಾವು ಹುಟ್ಟುತ್ತದೆ. ಆದ್ದರಿಂದ ಸೂರ್ಯಬಿಂಬದಿಂದಲೇ ಈ ಕಾವು ಬರುತ್ತದೆ. ಈ ಪ್ರಚಂಡವಾದ ಉಷ್ಣ ಸೂರ್ಯನ ಸುತ್ತ ನೂರು ಮೈಲಿಯವರೆಗೂ ಹರಡಿದೆ. ಈ ಸರಹದ್ದಿನೊಳಗೆ ಯಾವ ಪದಾರ್ಥವೂ ಇರಲಾರದು. ಎಲ್ಲವೂ ಸುಟ್ಟುಹೋಗುತ್ತದೆ. ಕಣ್ಣು ಮುಚ್ಚಿ ತೆರೆಯುವುದರೊಳಗಾಗಿ ಕೋಟಿ ಕೋಟಿ ಮೈಲಿ ದೂರದಲ್ಲಿ ಸೂರ್ಯನ ಬಿಸಿ ನಮಗೆ ಅನುಭವವಾಗುತ್ತಲೇ ಇರುತ್ತದೆ '

'ಮೇಷ್ಟ್ರೆ, ಈ ಉಷ್ಣವನ್ನು ಲೆಕ್ಕ ಮಾಡಿದಾರೆಯೆ ? '

'ಹೇಳುತ್ತೇನೆ........ಗ್ಯಾಸ್ ಲೈಟ್ ನೋಡಿಲ್ಲವೆ ? '

'ಗ್ಯಾಸು ಲೈಟೇ ? ನೋಡಿದೇನೆ. ಮನ್ನೆ ಗೌಡರ ಮನೆ ಮದುವೆಗೆ ತಂದಿದ್ದರು. ಪಂಪು ಹೊಡೆದರೆ ಉರಿಯುತ್ತದೆ. '

'ಅದೇ ಸೂರ್ಯಬಿಂಬದ ಬೆಳಕು ; ಮಧ್ಯಭಾಗದ ಬೆಳಕು– ಈ ಬೆಳಕಿಗಿಂತ ೨ ಕೋಟಿ ಪಟ್ಟು ಹೆಚ್ಚು. ಈತನ ಬಿಂಬದೊಳಗಿಂದ ಕಣ್ಣು ಕುಕ್ಕುವಂಥ ಬೆಳ್ಳಂಬಿಳುಪು ಜ್ವಾಲೆಗಳು ಸಾವಿರ ಮೈಲಿ ಎತ್ತರಕ್ಕೂ ಏಳುತ್ತಿರುವುದು ದೂರದರ್ಶಕದಲ್ಲಿ ಸ್ಪಷ್ಟವಾಗಿ ಕಾಣುತ್ತದೆ. '

'ಸಾವಿರ ಮೈಲೀನೆ ? '

'ಹೌದು. ಸರಿಯಾಗಿ ಲೆಕ್ಕ ಹೇಳಬೇಕು ಎಂದರೆ ೮೦ ಸಾವಿರ ಮೈಲಿ.

ಸೂರ್ಯಬಿಂಬದಿಂದ ನಿಮಿಷಕ್ಕೆ ೭೦೦ ಕೋಟಿ ಮಣದಷ್ಟು ಕಾಂತಿ ಬ್ರಹ್ಮಾಂಡದಲ್ಲಿ ಹರಡಿಕೊಳ್ಳುತ್ತಿದೆ ಎಂದು ಶಾಸ್ತ್ರಜ್ಞರು ಲೆಕ್ಕ ಮಾಡಿದಾರೆ, ತಾತಾ.'

'ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ, ಒಂದು ಕ್ಷಣದಲ್ಲಿ' ಈ ಕಾಂತಿ ಎಷ್ಟು ದೂರ ಹೋಗುತ್ತದೆಯೋ?'

'ಒಂದು ಲಕ್ಷದ ಎಂಬತ್ತಾರು ಸಾವಿರ ಮೈಲಿ.'

'ಸೂರ್ಯ ಎಷ್ಟು ಭಾರವೋ ಗೊತ್ತೆ ಮೇಷ್ಟ್ರೆ?'

'ಹೂಂ-ಭೂಮಿಗಿಂತ ಮೂರುಲಕ್ಷ ಪಾಲು ಹೆಚ್ಚು.'

'ಯಾವುದು ಕೇಳಿದರೂ ಲಕ್ಷ-ಕೋಟಿ. ಹೋಗಲಿ, ಈತ ನಮಗೆ ಎಷ್ಟು ದೂರ ಸ್ವಾಮಿ?'

'೯ ಕೋಟಿ ೩೦ ಲಕ್ಷ ಮೈಲಿ....ಇಷ್ಟೆಲ್ಲ ಏಕೆ? ದೊಡ್ಡ ಗಂಗಳದ ಹಾಗೆ ಬೆಳೆವ ದೊಡ್ಡ ಕುಂಬಳಕಾಯಿಗಳನ್ನು ನೋಡಿದೀಯಾ? ಸೀಗುಂಬಳ....'.

'ನೋಡಿದೀನಿ. ಸಾವಕಾರರ ತೋಟದ ತಿಪ್ಪೆಯ ಮೇಲೆ ಬೆಳೆದಿದ್ದವು.'

'ಸೂರ್ಯ ಇಂಥದೊಂದು ದೊಡ್ಡ ಕುಂಬಳಕಾಯಿ ಅಂದುಕೋ. ಆಗ ನಮ್ಮ ಭೂಗೋಳ ಚಿಕ್ಕದೊಂದು ಕಡಲೆಕಾಳು. ಈ ಕಡಲೆಕಾಳನ್ನೂ ಆ ಕುಂಬಳಕಾಯಿಗೆ ೧೧೫ ಅಡಿ ದೂರದಲ್ಲಿ ಇಟ್ಟರೆ ಅದು ನಮ್ಮ ಭೂಮಿಗೂ ಸೂರ್ಯನಿಗೂ ನಡುವೆ ಇರುವ ದೂರಕ್ಕೆ ಸರಿಹೋಗುತ್ತದೆ.'

'ಅದೆಲ್ಲ ಸರಿ ದೇವರು, ಈ ಗ್ರಹಗಳು ಈ ಸೂರ್ಯಮಂಡಲ ಎಲ್ಲಾ ತಿರುಗುತಾ ಇವೆ. ಮತ್ತೆ ಸೂರ್ಯನು ಕೂಡ ತನ್ನ ಸುತ್ತೂ ತಾನು ತಿರುಗುತಾ ಇದಾನೋ ಬುಗರಿ ಹಾಗೆ?'

'ಹೂಂ, ಕ್ಷಣಕ್ಕೆ ೨೫ ಮೈಲಿಯಂತೆ ತಿರುಗುತ್ತಾ ತನ್ನ ಆಕರ್ಷಣ ಶಕ್ತಿಯಿಂದ ಗ್ರಹಗಳನ್ನು ಈ ಖಗೋಳದಲ್ಲಿ ಬಿದ್ದು ಹೋಗದಂತೆ ಅದರ ಸ್ಥಾನದಲ್ಲೇ ಹಿಡಿದು ನಿಲ್ಲಿಸಿದಾನೆ.'

ಮೂಡಲ ಕೆಂಪು ಎಳೆ ಮಾಯವಾಗುತ್ತಿವೆ. ತಿಮ್ಮಯ್ಯ ಅತ್ತ ಕಡೆಯೇ ನೋಡುತ್ತ ಅಂದ:

'ನಿಜವಾಗಿಯೂ ಹಿರಿಯ! ನಮ್ಮ ಭೂಮಿಯ ಜನ್ಮಕ್ಕೆ ಈತನೇ ಕಾರಣ. ಖಗೋಳದಲ್ಲಿ ನಮ್ಮ ಭೂಮಿ ಬಿದ್ದು ಹೋಗದ ಹಾಗೆ ಹಿಡಿದು ನಿಲ್ಲಿಸಲಿಕ್ಕೆ ಈತನೇ ಕಾರಣ.'

'ಮೇಷ್ಟ್ರೆ, ಸೂರ್ಯನಲ್ಲಿ ಏನೋ ಮಚ್ಚೆಗಳಿವೆಯಂತಲ್ಲ?'

'ಮಚ್ಚೆಗಳಿವೆ, ಸುಬ್ಬ. ಇದೂ ಒಂದು ವಿಚಿತ್ರ. ಕಪ್ಪು ಬಳಿದ ಕನ್ನಡಿ ಚೂರಿನೊಳಗಿಂದ ನೋಡಿದರೆ ಒಂದೊಂದು ಸಲ ಇವು ಸೂರ್ಯ ಬಿಂಬದೊಳಗೆ ಕಾಣಬರುತ್ತವೆ. ಸೂರ್ಯನಲ್ಲಿ ಇವು ಕಾಣಿಸಿಕೊಂಡ ಐದು ವರ್ಷಕ್ಕೆ ಚೆನ್ನಾಗಿ ದೊಡ್ಡವು ಆಗುತ್ತವೆ. ಅಲ್ಲಿಂದ ಕ್ರಮವಾಗಿ ಕುಗ್ಗುತ್ತವೆ. ಹೀಗೆ ೧೧ ವರ್ಷಕ್ಕೆ ಒಂದುಸಲ ಹುಟ್ಟಿ ಬೆಳೆದು ಅಳಿಯುತ್ತ ಇರುತ್ತವೆ. ಇವನ್ನು ನೋಡಿಯೇ, ಇವು ತಿರುಗುವುದನ್ನು ನೋಡಿಯೇ, ಸೂರ್ಯ ತನ್ನ ಸುತ್ತ ತಿರುಗುತಾ ಇದಾನೆ ಎಂದು ಶಾಸ್ತ್ರಜ್ಞರು ಗ್ರಹಿಸಿದರು.'

'ಇದಕ್ಕೆ ಕಾರಣ ಕಂಡುಹಿಡಿದರೆ?'

'ಹೇಳಲಾರೆವು, ತಾತಾ. ಬಹಳ ಸಿದ್ಧಾಂತಗಳಿವೆ.'

'ಹೋಗಲಿ. ಇವಕ್ಕೂ ಯುದ್ಧಕ್ಕೂ ಏನೋ ಸಂಬಂಧವಿದೆಯಂತಲ್ಲ?'

'ಅಂಥಾದ್ದೇನೂ ಇಲ್ಲ. ಈ ಮಚ್ಚೆಗಳು ಹೆಚ್ಚಾಗಿ ಇದ್ದಾಗ ಮಾತ್ರ ನಮ್ಮ ಭೂಮಿಯ ಸುತ್ತ ಉತ್ತರ ಧ್ರುವದ ಬಳಿ ಕೆಲವು ವ್ಯತ್ಯಾಸ ಕಾಣುತ್ತವೆ. ಇದಕ್ಕಿಂತ ಹೆಚ್ಚಿನ ವಿಶೇಷವೇನೂ ಇಲ್ಲ.'

'ಮೇಷ್ಟ್ರೆ, ಸೂರ್ಯ ನಮಗೆ ಅನ್ನ ಕೊಡುತ್ತಿದಾನಲ್ಲವೆ?'

'ಹೌದು.'

'ಅದೇನು ದೇವರು ಅದು? ಈತನಿಗೂ ಅನ್ನಕ್ಕೂ ಏನು ಸಂಬಂಧ?'

ಸುಬ್ಬ ತನ್ನ ಹೈಸ್ಕೂಲು ಓದನ್ನು ಬೆಳಗಿಸಿದ. ತನ್ನ ಪಠ್ಯಪುಸ್ತಕ ತೆಗೆದು ಓದಿದ—

'ನಮ್ಮ ಗಿಡಮರಗಳಿವೆಯಲ್ಲ—ಇವುಗಳ ಬೇರು ನೀರನ್ನು ಹೀರಿಕೊಳ್ಳುತ್ತದೆ. ಈ ನೀರಿನಲ್ಲಿ ಗಿಡಗಳಿಗೆ ಬೇಕಾದ ಕೆಲವು ಮುಖ್ಯ ಪದಾರ್ಥಗಳಿವೆ. ಗಿಡದ ಎಲೆಗಳು ಗಾಳಿಯಿಂದ ಒಂದು ವಾಯು ಪದಾರ್ಥವನ್ನು ತೆಗೆದುಕೊಳ್ಳುತ್ತಿವೆ. ಬೇರಿನಿಂದ ಹೀರಿಕೊಂಡ ಪದಾರ್ಥ

ಗಳನ್ನೂ ಗಾಳಿಯಿಂದ ಸೆಳೆದುಕೊಂಡ ಈ ವಾಯುಪದಾರ್ಥವನ್ನೂ ಕಲೆಸಿ, ಗಿಡಗಳು ತಮಗೆ ಬೇಕಾದ ಆಹಾರವನ್ನು ಎಲೆಗಳಲ್ಲಿ ತಯಾರುಮಾಡಿ ಕೊಳ್ಳುತ್ತವೆ. ಈ ತಯಾರೀಗೆ ಸೂರ್ಯಕಾಂತಿ ಬೇಕೇ ಬೇಕು.'

'ಏನು ಸ್ವಾಮಿ, ಇದೆಲ್ಲ ನಿಜವೆ?'

'ನಿಜವೆ. ಗಿಡದ ಎಲೆಗಳಲ್ಲಿ ನಡೆವ ಈ ಅಡಿಗೆಗೆ ಸೂರ್ಯಕಾಂತಿಯೇ ಸೌದೆ. ಈ ಅಡಿಗೆಯನ್ನು ಗಿಡಗಳು ತಮ್ಮ ಎಲೆಗಳಲ್ಲೂ, ಕಾಯಿ ಹಣ್ಣು ಬೀಜಗಳಲ್ಲಿ ಅಡಗಿಸಿಡುತ್ತವೆ. ಇವನ್ನು ನಾವು ತಿನ್ನುತ್ತೇವೆ. ಆದ್ದರಿಂದ ಸೂರ್ಯನೇ ನಮಗೆ ಅನ್ನ ಕೊಟ್ಟ ಹಾಗಾಲಿಲ್ಲವೆ?'

'ಇದೋ ಸಮಾಚಾರ! ನಿಮ್ಮ ಸಂಗತಿಯೇನೋ ಸರಿ—ಅಕ್ಕಿ ಬೇಳೆ ಕಾಯಿ ಪಲ್ಯ ಎಣ್ಣೆ ತುಪ್ಪ ತಿಂಬವರದು. ಮಾಂಸ ತಿಂಬವರದೋ ಮತ್ತೆ?'

ಸುಬ್ಬ ಮತ್ತೆ ವರಸೆ ಮೊದಲು ಮಾಡಿದ.

'ತಾತಾ, ನೀವು ತಿನ್ನುವ ಮಾಂಸ ಕುರಿ ಮೇಕೆಯದೇ ತಾನೆ?'

'ಹೌದು.'

'ಆ ಪ್ರಾಣಿಗಳು ಹುಲ್ಲೂ ಸೊಪ್ಪೂ ತಿಂದಲ್ಲವೆ ತಮ್ಮ ಮಾಂಸ ವನ್ನು ಬೆಳೆಸಿಕೊಳ್ಳುವುದು!'

'ಸರಿ ಸರಿ....ತಿಳಿಯಿತು ಬಿಡು. ಇವೆಲ್ಲಾ ಗಿಡಗಳಿಂದ ಬದುಕ ಬೇಕು. ಈ ಗಿಡಗಳು ಸೂರ್ಯನಿಂದ. ಅಂತೂ ಇಂತೂ ಮತ್ತೆ ಆತನೇ ಅನ್ನ ಕೊಡುತ್ತಿದಾನೆ....ನಿಜವಾಗಿ ಸೂರ್ಯ ಭಗವಾನ ಎಷ್ಟು ದೊಡ್ಡವನು! ಎರಡೂ ಕೈಯೆತ್ತಿ ಮೊಕ್ಕಿದರೂ ಆತನ ಋಣ ತೀರಿಸಲಾರೆವು.' ಎರಡೂ ಕೈಯೆತ್ತಿ ಮೂಡಲಲ್ಲಿ ಮೂಡುತ್ತಿದ್ದ ಸೂರ್ಯಬಿಂಬಕ್ಕೆ ಮೊಕ್ಕಿದ.

'ಅಸಲು ಸಂಗತಿ—ಈ ಪ್ರಪಂಚವನ್ನು ನಾವು ಕಣ್ಣಿಂದ ನೋಡ ಲಿಕ್ಕೆ ಈತನೇ ಕಾರಣ. ಈ ಸೂರ್ಯಕಾಂತಿ ನಮ್ಮ ಕಣ್ಣೊಳಗೆ ಬಿದ್ದರೇನೇ ಹೊರತು ಏನೂ ಕಾಣಿಸದು.'

'ಅದಕ್ಕೇ ಕತ್ತಲಲ್ಲಿ ಹಾಗೆ ತಡಕಾಡುವುದು. ಆದರೆ ಚಂದ್ರ ಇದ್ದಾಗ ಸೂರ್ಯಕಾಂತಿ ಬೇಕಿಲ್ಲವಲ್ಲ?'

'ಆತನ ಬೆಳಕು ಸೂರ್ಯನಿಂದ ಸಾಲ ತೆಗೆದುಕೊಂಡದ್ದು.'

' ಹೌದು, ಹೌದು. ಮರೆತೆ. ಚಂದ್ರ ಗ್ರಹಗಳು ಬರೀ ಕನ್ನಡಿ ಚೂರು ಎಂದಿದ್ದಿರಿ. ಸೂರ್ಯನ ಬೆಳಕು ಬಿದ್ದರೇನೇ ಅವು ಹೊಳೆಯುವುದು.'

' ಮೇಷ್ಟ್ರೆ, ನಮ್ಮ ಆರೋಗ್ಯಕ್ಕೂ ಸೂರ್ಯ ಬಹಳ ಮುಖ್ಯವಲ್ಲವೆ?'

' ಹೌದು, ಸುಬ್ಬ, ಆತನ ಕಾಂತಿ ನಮ್ಮ ಚರ್ಮಕ್ಕೆ ತಗಲಿದರೆ ನಮ್ಮ ಶರೀರದಲ್ಲಿ ಒಂದು ಮುಖ್ಯವಾದ ಪದಾರ್ಥ ಹುಟ್ಟುತ್ತದೆ. ನಮ್ಮ ಮೈಯೊಳಗಿನ ಎಲುಬು ಹಲ್ಲುಗಳನ್ನು ಗಟ್ಟಿಯಾಗಿ ಬಲವಾಗಿ ಇಡುತ್ತದೆ ಈ ಪದಾರ್ಥ. ಇದರಿಂದಲೇ ಸೂರ್ಯನಿಗಾಗಿ ವಿಲಾಯತಿ ಜನ ಬಾಯಿ ಬಿಡುತ್ತಾರೆ.'

' ಅವರಿಗೆ ಹೀಗೆ ಕಾಣಿಸೋದಿಲ್ಲವೇನೋ!'

' ಕಾಣಿಸುವದಿಲ್ಲ. ನಮ್ಮ ದೇಶದಲ್ಲಿ ಕೂಡ ಉತ್ತರಾದಿ ಪ್ರಾಂತದಲ್ಲಿ ಶೀತಕಾಲದಲ್ಲಿ ಸೂರ್ಯ ಒಂದೆರಡು ಗಂಟೆ ಮಾತ್ರವೇ ಕಾಣಿಸುತ್ತಾನೆ.'

' ನಮಗೆ ಈತ ಅಷ್ಟು ಅಗತ್ಯವೆ?'

' ಸೂರ್ಯನೇ ಇಲ್ಲದಿದ್ದರೆ ಸಮುದ್ರಗಳೆಲ್ಲ ಗಡ್ಡೆ ಕಟ್ಟವೆ? ಈತನ ಕಾವಿನಿಂದಲೇ ಕಡಲ ನೀರು ಬಿಸಿಯಾಗಿ ಆವಿಯಾಗಿ ಮೋಡವಾಗಿ ಮಳೆ ಸುರಿಯುವದು. ಎಲ್ಲಾ ವಿಧದಲ್ಲೂ ಈತ ನಮಗೆ ಬಹಳ ಉಪಕಾರಿ, ತಾತ.'

' ಅದಕ್ಕೇ ಪೂರ್ವೀಕರು ನಸುಕಿನಲ್ಲೆ ಎದ್ದು ಈತನಿಗೆ ಅಡ್ಡಬೀಳು ಎಂದರು. ಬಿಳೀಯುವನ ಮತವೇ ಬೇರೆ. ಆದರೂ ಅವರು ಕೂಡ ಈತನ ಹಿರೇತನಾನ ಇಲ್ಲ ಎಂದಿಲ್ಲ. ಸೂರ್ಯ ದೇವರ ಸಂಗತಿ ಒಳ್ಳೇ ಬೆಳಗಿನ ಹೊತ್ತೇ ಕಿವಿಗೆ ಹಾಕಿದಿರಿ. 'ಪುಣ್ಯ ದಿನ ಇದು.'

ಸೂರ್ಯ ಪೂರ್ತಿಯಾಗಿ ಮೇಲೇರಿ ಬಂದ. ಥಳ ಎಂದು ಬೆಳಕು ಬಂದು ಕವಿಯಿತು. ತಿಮ್ಮಯ್ಯ ಅಂದ—

' ಮೊನ್ನೆ ಈತ ನಮ್ಮ ಸೂರ್ಯಮಂಡಲ ಒಂದು ಪಟ್ಟಣ ಎಂದ. ನಿಜ. ಈತನೇ ಆ ಪಟ್ಟಣಕ್ಕೆ ಅರಸ!'

—❀—

೫

## ಅರಸನ ಕುಟುಂಬ—ಗ್ರಹಗಳು

ಆಕಾಶದಲ್ಲಿ ಪಡುವಣ ದಿಕ್ಕಿನಲ್ಲಿ ಶುಕ್ರ ಹೊಳೆಯುತ್ತಿದಾನೆ. ತಿಮ್ಮಯ್ಯ ಕಾವಲಿನಿಂದ ಆಗಲೇ ದನ ಹೊಡೆದುಕೊಂಡು ಬರುತ್ತಿದಾನೆ.

'ಸಂಜೆಯು ಚಿಕ್ಕೆ ಹೊರಟಿದೆ' ಎಂದ.

'ಶುಕ್ರ ತಾತ, ಅದು' ಎಂದ ಸುಬ್ಬ.

'ಏನು ಉರಿಯುತ್ತಾನೋ ಎಲೆಕ್ಟ್ರಿಕ್ ದೀಪದ ಹಾಗೆ! ಒಕ್ಕಣ್ಣಿಂದಲೇ ಈತನ ಕಾಂತಿ ಹೀಗೆ ಇದೆಯಲ್ಲ. ಆ ವಾಮನಮೂರ್ತಿಯ ದರ್ಭೆ ದಂಡ ಇಲ್ಲದಿದ್ದರೆ ಚಂದ್ರನ ತಾತನಹಾಗೆ ಇರುತ್ತಿದ್ದನೋ ಏನೋ.'

'ಅಲ್ಲದೆ ಏನು? ಈಗಲೂ ಶುಕ್ರ ಚಂದ್ರನಿಗಿಂತ ದೊಡ್ಡವನೇ ತಾತ.'

'ಹೌದು ಹೌದು. ಬೃಹಸ್ಪತಿಯಾದಮೇಲೆ ಈತನೇ ಅಲ್ಲವೆ ರಾಕ್ಷಸ ಗುರು!'

'ಪುರಾಣ ಇರಲಿ, ತಾತ. ಶಾಸ್ತ್ರದ ಪ್ರಕಾರ ಶುಕ್ರ ಗ್ರಹ, ಚಂದ್ರ ಬರೀ ಉಪಗ್ರಹ.'

'ಓಹೋ, ಇದು ಬೇರೇನೆ?'—ತಿಮ್ಮಯ್ಯನಿಗೆ ದನಕ್ಕೆ ದಾಣಾ ಇಡುವ ಗದ್ದಲ.

ಸುಬ್ಬ ಕೇಳಿದ: 'ಮೇಷ್ಟ್ರೆ, ಶುಕ್ರನಲ್ಲಿ ಮನುಷ್ಯರಿದಾರೆಯೆ?'

'ಇಲ್ಲ. ಆದರೆ ಗಿಡಗೆಂಟೆ ಇದ್ದರೂ ಇರಬಹುದು ಸುಬ್ಬ. ಶುಕ್ರ ಗ್ರಹದ ಸುತ್ತಲೂ ದಟ್ಟವಾದ ಮಬ್ಬಿನ ಪರೆ ಒಂದಿದೆ. ಇದು ಶುಕ್ರನಲ್ಲಿಯ ಗಾಳಿಪರೆ. ಇದರಲ್ಲಿ **ಇಂಗಾಲಾಮ್ಲ ವಾಯು** ಹೆಚ್ಚಾಗಿ ಇದೆ. ಆದ್ದರಿಂದ ಇದರಲ್ಲಿ ಸಸಿಗಳು ಇದ್ದಾವು ಎಂದು ಶಾಸ್ತ್ರಜ್ಞರ ಅನುಮಾನ.'

‘ಅದೇನು ವಾಯು ಎಂದಿರಯ್ಯ?’ ತಿಮ್ಮಯ್ಯ ಹಾಲು ಕರೆಯಲು ಗಂಗೆಯ ಬಳಿಗೆ ಹೋಗುತ್ತಾ ಕೇಳಿದ.

ಮತ್ತೆ ಸುಬ್ಬನ ವ್ಯಾಖ್ಯಾನ: ‘ಗಾಳಿಯಿಂದ ಗಿಡಗಳು ಒಂದು ಪದಾರ್ಥವನ್ನು ತೆಗೆದುಕೊಳ್ಳುತ್ತವೆ ಎಂದು ಹೇಳಲಿಲ್ಲವೆ, ತಾತ? ಗಿಡಗಳ ಅನ್ನಕ್ಕೆ ಇದು ಬಹಳ ಮುಖ್ಯ. ಈ ಪದಾರ್ಥ ಒಂದು ಗಾಳಿ ಪದಾರ್ಥ. ಇದಕ್ಕೆ ಇಂಗಾಲಾಮ್ಲ ವಾಯು ಎಂದು ಹೆಸರು.’

‘ಅದೇಯೆ!’ ಎಂದ ತಿಮ್ಮಯ್ಯ. ಅರ್ಥವಾಯಿತೇನೋ! ಗೌರಿಯ ಕಾಲಿಗೆ ಹಗ್ಗ ಬಿಗಿದ.

‘ಮೇಷ್ಟ್ರೆ’ ಸೂರ್ಯ ಮಂಡಲದಲ್ಲಿ ಶುಕ್ರಗ್ರಹ ನಮ್ಮ ಭೂಮಿಗಿಂತ ಮುಂದೆ ಇದೆಯಲ್ಲವೆ?’ ಸುಬ್ಬ ಕೇಳಿದ.

‘ಹೌದು. ಭೂಮಿಗೂ ಬುಧನಿಗೂ ನಡುವೆ ಇದೆ. ಶುಕ್ರನೂ ಭೂಮಿಯೂ ಗಾತ್ರದಲ್ಲೂ ಭಾರದಲ್ಲೂ ಸುಮಾರಾಗಿ ಒಂದೇ ಮಾದರಿ.’

ತಿಮ್ಮಯ್ಯ ಹಾಲು ಕರೆಯುತ್ತಿದ್ದಾನೆ.

‘ಸ್ವಾಮಿ, ಈತ ಒಂದುಸಲ ಬೆಳಿಗ್ಗೆ ಕಾಣಿಸುತ್ತಾನಲ್ಲವೆ?’

‘ಹೌದು ತಾತ. ಸೂರ್ಯನ ಸುತ್ತಲೂ ಪ್ರದಕ್ಷಿಣೆ ಮಾಡುವಾಗ ಶುಕ್ರ ಒಂದೊಂದು ಸಲ ಸೂರ್ಯ ಮುಳುಗಿದ ಮೇಲೆ ಮುಳುಗುತ್ತಾನೆ. ಆಗ ನಮಗೆ **‘ಬೈಗಿನಚಿಕ್ಕೆ’**ಯಾಗಿ ಕಾಣಿಸುತ್ತಾನೆ. ಒಂದೊಂದುಸಲ ಸೂರ್ಯ ಹುಟ್ಟುವ ಮುನ್ನ ನಸುಕಿನಲ್ಲಿ ಕಾಣುತ್ತಾನೆ. ಆಗ ನಮಗೆ **‘ನಸುಕಿನ ಚಿಕ್ಕೆ.’**

‘ಹಾಗೇನು? ಸೂರ್ಯನ ಸುತ್ತಲೂ ತಿರುಗಲಿಕ್ಕೆ ಈತನಿಗೆ ಎಷ್ಟು ದಿನ ಬೇಕೋ?’

‘೨೨೪ ದಿನ—ಒಂದು ವಿಚಿತ್ರವಿದೆ ಈತನ ಪ್ರದಕ್ಷಿಣೆಯಲ್ಲಿ. ಈತನ **ಪಥ** (ಗ್ರಹಗಳ ಪ್ರದಕ್ಷಿಣೆಯ ದಾರಿಯನ್ನು ಪಥ ಎನ್ನುತ್ತಾರೆ) ಉಳಿದ ಗ್ರಹಗಳ ಪಥಗಳಂತೆ ಅಲ್ಲದೆ ಸುಮಾರಾಗಿ ಗುಂಡಗೇ ಇದೆ. ಇದು ಬಹಳ ವಿಶೇಷವಾದ ಸಂಗತಿ. ಶುಕ್ರಗ್ರಹ ಕ್ಷಣಕ್ಕೆ ೨೨ ಮೈಲಿ ವೇಗದಿಂದ ತಿರುಗುತ್ತಾ ಇದೆ.’

‘ಮೇಷ್ಟ್ರೆ, ಈತನಿಗೆ ದಿನಕ್ಕೆ ಎಷ್ಟು ಹೊತ್ತು?’

'ಸರಿಯಾಗಿ ತಿಳಿಯುವುದಿಲ್ಲ, ಸುಬ್ಬ. ಈ ಗ್ರಹದ ಸುತ್ತಲೂ ದಟ್ಟವಾದ ಕತ್ತಲು ಇದೆ. ಎಷ್ಟೇ ಶಕ್ತಿವಂತವಾದ ದೂರದರ್ಶಕದ (ದುರ್ಬೀನು) ಮೂಲಕವಾದರೂ ಒಳಗಿನ ಪರಿಸ್ಥಿತಿ ಕಾಣಿಸದು.'

'ಅಯ್ಯ, ಒಕ್ಕಣ್ಣಾದರೂ ಈತ ಚಂದ್ರನಿಗಿಂತ ದೊಡ್ಡವನು ಎನ್ನುತ್ತೀಯಲ್ಲ?'

'ಆ ಪುರಾಣ ಕಥೆ ಇರಲಿ. ಚಂದ್ರ ಒಂದು ಉಪಗ್ರಹ. ಶುಕ್ರ ಗ್ರಹ. ನಮ್ಮ ಭೂಗ್ರಹಕ್ಕೆ ಚಂದ್ರ ಉಪಗ್ರಹ. ಭೂಮಿಯ ಸುತ್ತಲೂ ತಿರುಗುತ್ತಿದಾನೆ. ಹೀಗೆಯೇ ಉಳಿದ ಗ್ರಹಗಳಿಗೂ ಉಪಗ್ರಹಗಳಿವೆ. ಶುಕ್ರನಿಗೂ ಒಬ್ಬ ಚಂದ್ರ ಇದಾನೆ ಎಂತ ಅನುಮಾನ........'

ಹಸು ಒದೆಯಿತು.

'ಛೀ, ಒದ್ದೆಯೆನೇ....ನಿನ್ನ ಹಾಲು ಹಳ್ಳಹರಿಯ....' ಕಾಲಿಗೆ ಕಟ್ಟಿದ್ದ ಹಗ್ಗ ಬಿಚ್ಚಿದ.

ನಾನು ನನ್ನ ಗುಂಗಿನಲ್ಲೇ ಇದೇನೆ.....'ಆದರೆ ಒಂದು ಮಾತು, ತಾತ. ಶುಕ್ರನಿಗೆ ಸಹ ಚಂದ್ರನಿಗೆ ಇದ್ದಂತೆ ಕಳೆಗಳು ಇವೆ.'



ಶುಕ್ರಗ್ರಹ – ಕಳೆಗಳು

ಹಾಲಿನ ತಂಬಿಗೆಯೊಡನೆ ತಾತ ಒಳಕ್ಕೆ ಹೋದ. ಕೊಂಚ ಹೊತ್ತು ಸದ್ದಿಲ್ಲ. ಸುಬ್ಬ ಮತ್ತೆ ಅಲ್ಲಾಡಿಸಿದ.

'ಹಾಗಾದರೆ ಶುಕ್ರನಲ್ಲಿ ಗಿಡ ಗೆಂಟೆ ಇದ್ದಾವಲ್ಲವೆ?'

'ಹಾಗೆ ಅಂತ ಊಹೆ. ಎಂಥ ಜೀವಿಯೇ ಆಗಲಿ ಬದುಕಲಿಕ್ಕೆ ಸ್ವಲ್ಪ ಕಾವು ಬೇಕು. ಶುಕ್ರನಲ್ಲಿ ಎಷ್ಟು ಕಾವು ಇದೆಯೋ ಸರಿಯಾಗಿ ನಮಗೆ ತಿಳಿಯದು. ನಮಗೆ ಎಟಕುವ ಲೆಕ್ಕ ಅದರ ಮೇಲಿರುವ ಕತ್ತಲು ಪರೆಯದು. ಇದನ್ನು ಲೆಕ್ಕ ಹಿಡಿದರೂ ಹಗಲು ಹೊತ್ತು ಬದುಕಲಿಕ್ಕೆ ಬೇಕಾದಷ್ಟು ಕಾವು ಇದ್ದಂತೆಯೇ ಕಾಣುತ್ತದೆ. ಆದರೆ ರಾತ್ರಿ ಹೊತ್ತು ಶುಕ್ರಲೋಕದಲ್ಲಿ ಅಸಾಧ್ಯವಾದ ಚಳಿ! ಮಂಜಿಗಿಂತ ತಂಪು! ಅಂಥ

ತಂಡಿಯಲ್ಲೂ ಬದುಕುವ ಜೀವಿಗಳು—ಅತಿ ಸೂಕ್ಷ್ಮವಾದವು— ಇವೆಯೋ ಏನೋ, ಹೇಳಲಾರೆವು. ಈ ಸಂಗತಿಯನ್ನು ದೃಢವಾಗಿ ತೀರ್ಮಾನ ಮಾಡುವ ಶಕ್ತಿ ಶಾಸ್ತ್ರಕ್ಕೆ ಇನ್ನೂ ಬರಲಿಲ್ಲ, ಸುಬ್ಬ. ಆದರೂ ಇಂಗಾಲಾಮ್ಲ ವಾಯು ಸಸ್ಯಗಳ ಆಹಾರಕ್ಕೆ ಅಗತ್ಯವಾದ್ದರಿಂದ ಅಲ್ಲಿ ಸಸ್ಯಗಳಿದ್ದಾವು ಎಂದು ನಂಬಿದಾರೆ. ಅದಕ್ಕೆ ಕಾರಣಗಳೂ ಪ್ರಮಾಣಗಳೂ ಇಲ್ಲದಿಲ್ಲ.'

ತಿಮ್ಮಯ್ಯ ತಾತ ಒಳಗಿನಿಂದ ಬಂದ.

'ಅಯ್ಯಾ, ಹಿಂದೆ ಒಂದು ಸಲ ಭೂಮಿ, ಶುಕ್ರ, ಇವೆಲ್ಲಕ್ಕೂ ಏನೋ ಹೆಸರು ಹೇಳಿದ್ದೆ. ಮರೆತು ಹೋಯಿತು' ಎಂದ.

'ಭೂಮಿ, ಅಂಗಾರಕ, ಬುಧ, ಶುಕ್ರ—ಇವು **ಪೃಥ್ವೀಗ್ರಹ**ಗಳು. ಅಂಗಾರಕ, ಭೂಮಿ, ಬುಧ, ಮೂರೂ ಗಡ್ಡೆಕಟ್ಟೆ ಒಂದೇ ಮಾದರಿಯಾಗಿ ಭೂಮಿಯ ಹಾಗೇ ಇವೆ. ಶುಕ್ರನ ಸಂಗತಿ ಇನ್ನೂ ಅನುಮಾನವಾಗಿ ಇದೆ. ಈ ನಾಲ್ಕು ಗ್ರಹಗಳೂ ಸೂರ್ಯನಿಗೆ ಸಮೀಪವಾಗಿ ಇವೆ. ಗ್ರಹ ಕುಟುಂಬದಲ್ಲಿ ಇವು ಚಿಕ್ಕವು. ಉಳಿದ ದೊಡ್ಡ ಗ್ರಹಗಳೊಡನೆ ಹೋಲಿಸಿದರೆ ಸೂರ್ಯನ ಸುತ್ತಲೂ ಇವು ಪ್ರದಕ್ಷಿಣೆ ಮಾಡಲು ತೆಗೆದುಕೊಳ್ಳುವ ಕಾಲ ಬಹಳ ಸ್ವಲ್ಪ, ಇವುಗಳ ದಿನವೂ ಅಷ್ಟೆ.'

'ಮೇಷ್ಟ್ರೆ, ಪೃಥ್ವೀ ಗ್ರಹಗಳು ಎಂದರೆ ಇವಕ್ಕೂ ನಮ್ಮ ಭೂಮಿಗೂ ಬಹಳ ಹತ್ತಿರ ಬಳಗ ಎಂದ ಹಾಗೆ ಆಗಲಿಲ್ಲವೆ? ಹಾಗೇನಾದರೂ ಇದೆಯೆ?'

'ಹೌದು, ಇದೆ. ಇವುಗಳಲ್ಲಿ ಬುಧ ಚಿಕ್ಕವನು. ಸೂರ್ಯನಿಗೆ ಬಹಳ ಹತ್ತಿರ.'

'ನಮಗೆ ಕಾಣಿಸುತ್ತಾನೆಯೆ ದೇವರು?'

'ಕಾಣಿಸುವುದಿಲ್ಲ. ಸೂರ್ಯನ ಬೆಳಕಿನಿಂದ ನಮ್ಮ ಕಣ್ಣು ಕಾಣಲಾರದು. ಸೂರ್ಯನಿಗೆ ಬಹಳ ಹತ್ತಿರವಲ್ಲವೆ ಮತ್ತೆ? ಅದರಿಂದ. ಆದರೆ ಯಾವಾಗಲಾದರೂ ಸಂಜೆಯ ಹೊತ್ತು ಅಕಸ್ಮಾತ್ತಾಗಿ ಕಾಣಿಸಿದರೂ ಕಾಣಿಸಬಹುದು.'

'ಈತ ನಮ್ಮ ಚಂದ್ರನ ಮಗನಲ್ಲವೆ?'

' ಹಾಗೆಂದು ನಮ್ಮ ಪುರಾಣಗಳ ಕಥೆ. ಆದರೆ ಚಂದ್ರನಿಗಿಂತ ಬುಧ ಗಾತ್ರದಲ್ಲಿ ದೊಡ್ಡವನು, ತಾತ. ಅದಕ್ಕೆ ಎರಡರಷ್ಟು. ಚಂದ್ರನ ಹಾಗೆಯೆ ಗಟ್ಟಿಯಾಗಿ ಗಡ್ಡೆಕಟ್ಟಿ ಘನದಶೆಯಲ್ಲಿ ಇದೆ ಬುಧಗ್ರಹ. ಬುಧ ನಿಗೂ ಕಳೆಗಳಿವೆ.'

' ಪುರಾಣಕ್ಕೂ ಶಾಸ್ತ್ರಕ್ಕೂ ಸ್ವಲ್ಪ ಹೋಲಿಕೆ ಇಲ್ಲವೇ ಮೇಷ್ಟ್ರೆ ? '

' ಇಲ್ಲದೆ ಏನು ! ಈ ವಿಷಯವಾಗಿ ಇನ್ನೂ ಬಹಳ ಪರಿಶೋಧನೆ ನಡೆಯಬೇಕಾಗಿದೆ .'

' .... ಇನ್ನೂ ಕೇಳಿ ಮತ್ತೆ—ಚಂದ್ರ ನಮಗೆ ಯಾವಾಗಲೂ ಒಂದೇ ಪಕ್ಕವೇ ಕಾಣಿಸುತ್ತಾನೆ .'

' ಏನು ? ಎರಡನೆ ಪಕ್ಕ ಕಾಣಿಸದ ? '

' ಇಲ್ಲ ತಾತ. ಇದಕ್ಕೆ ಕಾರಣ – ಚಂದ್ರ ನಮ್ಮ ಭೂಮಿಯ ಸುತ್ತಲೂ ತಿರುಗುವ ಕಾಲವೂ ತನ್ನ ಸುತ್ತ ತಾನೇ ಪ್ರದಕ್ಷಿಣೆ ಮಾಡುವ ಕಾಲವೂ ಒಂದೇ ಆಗಿರುವುದೇ. ....ಸುಮಾರು ೩೦ ದಿನದಲ್ಲಿ ತನ್ನ ಸುತ್ತ ತಿರುಗುತ್ತಾನೆ. ಸರಿಯಾಗಿ ಅದೇ ಕಾಲಕ್ಕೆ ಭೂಪ್ರದಕ್ಷಿಣೆಯನ್ನೂ ಮಾಡು ತ್ತಾನೆ.'

' ಬುಧನೂ ಹೀಗೇನೆ ? '

' ಭೇಷ್ ಸುಬ್ಬು, ಸರಿಯಾಗಿ ಊಹಿಸಿದೆ. ಅದೇ ತಾನೆ ವಿಚಿತ್ರ ; ಬುಧನಿಗೂ ಇದೇ ಗುಣ ಇದೆ. ಇಷ್ಟೇ ಅಲ್ಲ. ಇನ್ನೂ ಬಹಳ ಹೋಲಿಕೆ ಗಳಿವೆ ಚಂದ್ರನಿಗೂ ಬುಧನಿಗೂ. ಚಂದ್ರನ ಸುತ್ತ ಗಾಳಿ ಇಲ್ಲದಿರುವ ಹಾಗೇ ಬುಧನ ಸುತ್ತಲೂ ಇಲ್ಲ.'

' ಹಾಗಾದರೆ ಜೀವಿ ಯಾವುದೂ ಇಲ್ಲವೆಂದೇ ತಾನೆ ? '

' ಹೇಗೆ ಇದ್ದೀತು ? ಗಾಳಿ ಇಲ್ಲ. ಇಷ್ಟೇ ಅಲ್ಲದೆ ಬುಧಗ್ರಹ ಒಂದು ಸಲ ಸೂರ್ಯನಿಗೆ ಬಹಳ ದೂರವಾಗಿ ಇರುತ್ತದೆ. ಇನ್ನೊಂದು ಸಲ ಬಹಳ ಹತ್ತಿರ ಬರುತ್ತದೆ. ಇದರಿಂದ ಅತ್ಯುಷ್ಣ, ಅತಿ ಶೀತ.'

' ಹೌದು ಮತ್ತೆ. ಗಾಳೀನೂ ಇಲ್ಲದೆ ಹೀಗೆ ತಣ್ಣಗೆ ಮಂಜಿನ ಗಡ್ಡೆಯಾಗಿ ಇದ್ದರೆ ಯಾವ ಪ್ರಾಣಿ ತಾನೆ ಬದುಕೀತು ! '

‘ ಮೇಷ್ಟ್ರೆ, ಬುಧನ ಪ್ರದಕ್ಷಿಣ ಪಥದಲ್ಲಿ ಶುಕ್ರನಿಗೆ ಇದ್ದಂತೆ ವಿಚಿತ್ರ ವೇನಾದರೂ ಇದೆಯೆ ? ’

‘ ಇದೆ. ಬುಧನ **ಪಥ** ಬಹಳ ಉದ್ದುದ್ದವಾಗಿ ಇದೆ. ಇದಕ್ಕೆ ಕಾರಣ, ಈತನಿಗೂ ಸೂರ್ಯನಿಗೂ ನಡುವೆ ಇರುವ ಅಂತರದಲ್ಲಿ ಬಹಳ ವ್ಯತ್ಯಾಸಗಳಿರುವುದೇ.’

ತಾತ ಎಲೆ ಅಡಿಕೆ ಮೆಲ್ಲುತ್ತ ಕೇಳಿದ:

‘ಈತನ ವರ್ಷ ಎಷ್ಟು ದಿನದ್ದು ಸ್ವಾಮಿ ? ’

‘೮೮ ದಿನದಲ್ಲಿ ಸೂರ್ಯನ ಸುತ್ತ ಒಂದು ಪ್ರದಕ್ಷಿಣೆ ಮಾಡುತ್ತಾನೆ. ತಾತ, ಇನ್ನೊಂದು ವಿಶೇಷ. ಬುಧಗ್ರಹ ಎಲ್ಲ ಗ್ರಹಗಳಿಗಿಂತ ಹೆಚ್ಚು ವೇಗ ದಿಂದ ತಿರುಗುತ್ತಿದೆ. ಕ್ಷಣಕ್ಕೆ ೨೩ ಮೈಲಿ. ಒಂದೊಂದು ಸಲ ೩೬ ಮೈಲಿ ಕೂಡ ’

‘ಸೌರವ್ಯೂಹದಲ್ಲಿ ಶುಕ್ರನ ತರುವಾಯ, ಭೂಮಿಯದೇ ಅಲ್ಲವೆ ಸ್ಥಾನ, ಮೇಷ್ಟ್ರೆ ? ’

‘ಆಕೆಯ ಸಂಗತಿ ಸ್ವಲ್ಪ ಹೇಳಿ ದೇವರು. ನಮಗೆ ಬೇಕಾದ್ದು ಅದೇ ಅಲ್ಲವೆ ಮುಖ್ಯವಾಗಿ.’

‘ನಮ್ಮ ಭೂಗ್ರಹ ಕೂಡ ಒಂದು ಗೋಳ. ಎಂದರೆ ಒಂದು ಗುಂಡು. ಇದಕ್ಕೆ ಉತ್ತರ ದಕ್ಷಿಣ ಧ್ರುವಗಳು ಇವೆ. ಇದು ಆರಿ ತಣ್ಣಗಾಗಿ ಗಡ್ಡೆ ಕಟ್ಟಿದ ಗ್ರಹ. ಪ್ರಾಣಿಗಳು ಬದುಕಲಿಕ್ಕೆ ಸಾಕಾಗುವಷ್ಟು ಕಾವು, ಬೇಕಾ ದಷ್ಟು ಗಾಳಿ, ನಮಗೆ ತಿಳಿದಮಟ್ಟಿಗೆ ಈ ವಿಶಾಲ ವಿಶ್ವದಲ್ಲಿ ಈ ಭೂಲೋಕ ಒಂದರಲ್ಲೇ ಇವೆ.’

‘ ಆದ್ದರಿಂದಲೇ ಪಿಪೀಲಿಕಾದಿ ಬ್ರಹ್ಮಪರ್ಯಂತ ಸಮಸ್ತ ಜೀವರಾಶಿ ಗಳೂ ಇಲ್ಲಿವೆ.’

‘ತಾತ, ನಮ್ಮ ಭೂಮಿಯ ದಿನ ವರ್ಷಗಳ ಪ್ರಮಾಣ ಗೊತ್ತಿ ದೆಯೆ ? ’ ಕುಚೇಷ್ಟೆಗೆ ಪ್ರಶ್ನೆಹಾಕಿದ ಸುಬ್ಬ.

ತಾತ ಬೆದರುವ ಪಿಂಡವೆ! ಬಜಾಯಿಸಿ ಕೊಟ್ಟ ಬದಲು.

‘ಏನೆಂದೆ ? .... ೨೪ ಗಂಟೆಗೆ ಒಂದು ದಿನ. ಸೂರ್ಯಪ್ರದಕ್ಷಿಣೆಗೆ

೩೬೫ ದಿನ. ಮೊದಲೇ ಹೇಳಿರಲಿಲ್ಲವೆ, ಅಷ್ಟರಲ್ಲೇ ಮರೆತುಹೋಯಿತೆ?' ಎಂದು ಕೊಂಚ ತಿವಿದ ತಿಮ್ಮಯ್ಯ.



ಅಂಗಾರಕ—ದೂರದರ್ಶಕದಿಂದ

ಸುಬ್ಬ ಹೊಟ್ಟೆಬಿರಿಯೆ ನಕ್ಕ.

ಈ ಮುದುಕನಲ್ಲಿ ಇನ್ನೂ ಅಷ್ಟು ಹುರುಪು ಹಾಸ್ಯ ಇವೆ.

'ಮೇಷ್ಟ್ರೆ, ಅಂಗಾರಕ ಗ್ರಹದಲ್ಲಿ ಮನುಷ್ಯರಿದಾರಂತೆ.'

'ಅನುಮಾನದಲ್ಲೇ ಇದೆ ವಿಷಯ.'

'ಕಾಲುವೆ ಹಳ್ಳ ಕಾಣಿಸುತ್ತವೆಯಂತೆ.'

'ಏನು, ನಮ್ಮ ಕಾಲುವೆಗಳಂಥ ಕಾಲುವೆಗಳೆ?'

'ದೂರದರ್ಶಕದೊಳಗಿಂದ ನೋಡಿದರೆ ಹೀರೆಕಾಯಿ ಹೀಚಿನಲ್ಲಿದ್ದಂತೆ ಅಚ್ಚುಕಟ್ಟಾಗಿ ಇರುತ್ತವೆ ಈ ಕಾಲುವೆಗಳು. ಒಂದೊಂದು ಕಡೆ ಮಡುವಿನಂಥ ಪ್ರದೇಶಗಳಲ್ಲಿ ಎಲ್ಲವೂ ಸಂಗಮವಾದಂತೆ ಕಾಣುತ್ತವೆ.'

ಅಂಗಾರಕ ಜನರು


ಒಬ್ಬ ಶಾಸ್ತ್ರಜ್ಞನ ಊಹಾಗಾನ!

'ಅಲ್ಲಿನ ಮನುಷ್ಯರು ತೋಡಿದರೋ ಏನೋ?'

'ಹಾಗೆ ಕೆಲವರು ಶಾಸ್ತ್ರಜ್ಞರು ವಾದಿಸುತ್ತಿದಾರೆ ತಾತ .... ಇಕೊ, ಆ ಮನುಷ್ಯರು ಹೀಗೆ ಇರುತ್ತಾರೆ ಎಂತ ಒಬ್ಬ ಶಾಸ್ತ್ರಜ್ಞನ ಊಹೆ.'

ಚಿತ್ರ ಗೀಚಿದೆ. ತಿಮ್ಮಯ್ಯ ಮೂಗಿನ ಮೇಲೆ ಬೆರಳಿಟ್ಟು,

'ಏನು? ಇವರು ಮನುಷ್ಯರೆ? ಇವರಿಗೆ ಕೈಯೂ ಕಾಲೂ ಏನೂ ಇಲ್ಲ ಎಂತಲೆ ಆ ಶಾಸ್ತ್ರಿಗಳ ಅಭಿಪ್ರಾಯ?' ಎಂದ.

'ಹೌದು, ಅದೇ. ಆ ತಲೆ ನೋಡಿದೆಯಾ? ಎಷ್ಟು ದೊಡ್ಡದೋ! ಅವರಿಗೆ ಎಲ್ಲವೂ ಮೇದಸ್ಸೇ! ಉಳಿದ ಅವಯವಗಳು ಕಡಮೆ ಎಂದು ಅವನ ಅಭಿಪ್ರಾಯ. ಮಿದುಳು ಒಂದರಿಂದಲೇ ಎಲ್ಲವೂ ನಡೆದು ಹೋಗುತ್ತದೆ.'

'ಇದರಲ್ಲಿ ಒಬ್ಬರು ಕೂತಿದ್ದ ಹಾಗೆ, ಮತ್ತೊಬ್ಬರು ನಿಂತಿದ್ದ ಹಾಗೆ ಏನು?'

'ಮತ್ತೆ....'

'ಈ ಕಾಲುವೆಗಳು ಮುಖ್ಯವಾಗಿ ಬೇಸಗೆಯಲ್ಲಿ ಹೆಚ್ಚಾಗಿ ಕಾಣು ತ್ತವೆ.'

'ಯಾಕೋ?'

'ಶೀತಕಾಲದಲ್ಲಿ ಅಂಗಾರಕನ ಉತ್ತರ ಧ್ರುವದ ಬಳಿ ಮಂಜು ಗಡ್ಡೆ ಕಟ್ಟಿ ಬೆಳ್ಳಗೆ ಕಾಣಿಸುತ್ತದೆ. ಬೇಸಗೆಯಲ್ಲಿ ಇದು ಮಾಯವಾಗುತ್ತದೆ. ಶಾಸ್ತ್ರಜ್ಞರು ಹೀಗನ್ನುತ್ತಾರೆ:—ಬೇಸಗೆಯಲ್ಲಿ ಕರಗಿದ ಈ ಮಂಜಿನಗಡ್ಡೆಯ ನೀರನ್ನು ಇಂಥ ಕಾಲುವೆಗಳಿಗೆ ಹರಿಯಿಸಿ ಬೇಸಾಯ ಮಾಡುವಷ್ಟು ಬುದ್ಧಿಯುಳ್ಳ ಮನುಷ್ಯರು ಅಂಗಾರಕ ಗ್ರಹದಲ್ಲಿದಾರೆ.'

'ಹಾಗಾದರೆ ಅಂಗಾರಕ ಋತುಗಳು ನಮ್ಮ ಋತುಗಳ ಹಾಗೇನೆ, ಮೇಷ್ಟ್ರೆ?'

'ಇದಕ್ಕಿಂತ ಹೆಚ್ಚು ಕಾಲ ಇರುತ್ತವೆ. ಅಂಗಾರಕ ಸೂರ್ಯನಿಗೆ ಬಹಳ ದೂರದಲ್ಲಿರುವುದೇ ಇದಕ್ಕೆ ಕಾರಣ. ಅದರಿಂದಲೇ ನಮ್ಮ ಭೂಮಿಯ ಮೇಲಿದ್ದಷ್ಟು ಬಿಸಿ ಅಲ್ಲಿ ಯಾವಾಗಲೂ ಇಲ್ಲ.'

'ಮನುಷ್ಯರು ಇದಾರೆ ಅಂದಿರಲ್ಲ?'

'ಅನುಮಾನ ಎನ್ನಲಿಲ್ಲವೆ? ದೃಢವಾಗಿ ಹೇಳಲಾರೆ. ದೂರ ದರ್ಶಕದಿಂದ ಅಂಗಾರಕ ಗ್ರಹದಲ್ಲಿ ಅಲ್ಲಲ್ಲಿ ಕೆಂಪು ಪ್ರದೇಶಗಳೂ ಇನ್ನು ಕೆಲವು ನೀಲಿಬಣ್ಣದ ಪ್ರಾಂತಗಳೂ ಇದ್ದಂತೆ ಕಾಣುತ್ತವೆ. ಕೆಂಪು ಪ್ರದೇಶಗಳು ಮರಳುಗಾಡು ಆಗಿರಬೇಕೆಂದು ಶಾಸ್ತ್ರಜ್ಞರ ಊಹೆ.'

'ಆ ನೀಲಿ ಬಣ್ಣದ್ದು ಏನೋ ಮತ್ತೆ?'

'ಅದು ಗಿಡಗಂಟೆಯಿರಬಹುದು ಅನ್ನುತ್ತಾರೆ. ಹೀಗೆನ್ನಲು ಬಲ

ವಾದ ಪ್ರಮಾಣಗಳಿವೆ. ಅಂಗಾರಕನ ಸುತ್ತಲೂ ನಮ್ಮ ಭೂಮಿಗೆ ಇದ್ದ ಹಾಗೆ ಒಂದು ಗಾಳಿ ಪರೆ ಇದೆ. ಆ ಗಾಳಿ ಪರೆಯಲ್ಲಿ ನಮಗೆ ಬದಕಲು ಬೇಕಾಗುವಷ್ಟು ಗಾಳಿಯಿಲ್ಲದಿದ್ದರೂ ಇತರ ಪ್ರಾಣಿಗಳು ಯಾವುದಾದರೂ, ನಮ್ಮ ಈ ಭೂಗೋಳದಲ್ಲಿ ಇರುವಂಥವೋ ಅಥವಾ ನಮಗೆ ತಿಳಿಯದಂಥವೋ, ಜೀವಿಸುತ್ತಿರಬಹುದು.'

ತಿಮ್ಮಯ್ಯ ಎಲೆಅಡಿಕೆ ಉಗುಳುತ್ತ ಹೇಳಿದ: 'ಈತನಿಗೂ ಭೂದೇವಿಗೂ ಬಹಳ ಹೋಲಿಕೆಯಿದೆ ಎಂದಿರಿ. ಮತ್ತೆ ಈತನ ದಿನಮಾನ ವೇನೋ?'

'ನಮ್ಮ ದಿನಕ್ಕಿಂತ ಅರ್ಧಗಂಟೆ ಹೆಚ್ಚು.'

'ಹೂಂ, ಬಹಳ ಹತ್ತಿರವೇ ಆಯಿತು. ಹಾಗಾದರೆ ವರ್ಷವೂ ಹೀಗೇನೆ ಮೇಷ್ಟ್ರೆ?'

'ಅಲ್ಲವಯ್ಯ, ೬೮೭ ದಿನ.'

'ಅಬ್ಬಾ, ನಮಗೆ ಎರಡರಷ್ಟೆ! ಹೋಗಲಿ, ಈತನ ಗಾತ್ರವೆಷ್ಟು ಸ್ವಾಮಿ?'

'ಭೂಗೋಳದಲ್ಲಿ ಒಂಬತ್ತನೆಯ ಭಾಗ.'

'ಸರಿ. ಶುಕ್ರನಿಗೆ ಚಂದ್ರ ಇರುವುದೂ ಇಲ್ಲದ್ದೂ ಅನುಮಾನ ಎಂದಿರಿ. ಅಂಗಾರಕನಿಗೋ?'

'ಇಬ್ಬರು ಚಂದ್ರರು ಇದಾರೆ, ತಾತ.'

'ಹಾಗೆಯೇ! ಉಳಿದ ಗ್ರಹಗಳಿಗೂ ಹೀಗೆಯೇ ಇದಾರೆಯೆ?'

'ಹೂಂ, ಬೃಹಸ್ಪತಿಗೆ ಹನ್ನೊಂದು ಜನ.'

'ಪರವಾ ಇಲ್ಲ! ನಿಮ್ಮ ಶಾಸ್ತ್ರಿಗಳು ಗಟ್ಟಿಗರೇ ಸ್ವಾಮಿ. ಒಬ್ಬ ಚಂದ್ರನಿಂದಲೇ ಆತನ ಸಂಸಾರ ಬೀದಿಗೆ ಬಂತು. ಇನ್ನೂ ಹತ್ತು ಜನರನ್ನು ಆತನ ಕೊರಳಿಗೆ ಕಟ್ಟಿದರೆ? ಗಟ್ಟಿಗರೆ!'

ಸುಬ್ಬನ ಹೊಟ್ಟೆ ಹುಣ್ಣಾಯಿತು.

'ನಗುತ್ತೀಯಲ್ಲವೆ? ಎಲ್ಲಿ, ಈಗ ಹಾಗೆ ಪುರಾಣ ಹೇಳುವಂಥವರು? ಯಾವಾಗ ನೋಡಿದರೂ ಇದು ಇದು, ಅದು ಅದು ಎಂದು ಹಲ್ಲು ಕಿರಿಯುತ್ತೀರಿ.... ಏನಯ್ಯಾ ನಿಮ್ಮ ಇದು, ಅದು ಎಂದು ನಿಲೆಹಾಕಿ ಕೇಳಿದೆವೋ,

ಇನ್ನೂ ಗೊತ್ತಾಗಿಲ್ಲ, ಗೊತ್ತಾಗುತ್ತದೆ ಅನ್ನುತ್ತೀರಿ.... ಇದೇ ಮಜಾ! ಆ ಶಾಸ್ತ್ರಿಗಳು ಇವನ್ನೆಲ್ಲ ನೋಡುತ್ತಿದಾರೆ.... ಹಿಂದೆ ನಮ್ಮವರು ಹೇಳಿಹ ಯಕ್ಷರೂ ಗಂಧರ್ವರೂ ಕಾಣಿಸುತ್ತಾರೋ ಏನೋ.'

ಈ ದೇಶದಲ್ಲಿ ಪುರಾಣವೆಂದರೆ ಎಷ್ಟು ನಂಬಿಗೆ. ಅದರಲ್ಲೂ ಈ ರೈತ ಹಳೆಯ ಶತಮಾನದವನು. ಪುರಾಣ ಕಥೆಗಳನ್ನೆಲ್ಲಾ ಕರಗಿಸಿ ರಕ್ತಗತ ಮಾಡಿಕೊಂಡ ಮನುಷ್ಯ!

'ಮೇಷ್ಟ್ರೆ, ಬೃಹಸ್ಪತಿಗೂ ಅಂಗಾರಕನಿಗೂ ನಡುವೆ ಸಾವಿರಾರು ಗ್ರಹಗಳಿವೆ ಎಂದಿರಿ. ಅವುಗಳ ಸಂಗತಿಯೇನು?'

'ಹೌದು ಸ್ವಾಮಿ, ಒಂಬತ್ತು ಗ್ರಹಗಳೂ ಅಲ್ಲದೆ ಇನ್ನೂ ಯಾವು ಯಾವುವೋ ಇವೆ ಎಂದಿರಿ ಅವುಗಳ ವಿಷಯ ಸ್ವಲ್ಪ ಹೇಳುತ್ತೀರಾ?'

'ಬೃಹಸ್ಪತಿಗೂ ಅಂಗಾರಕನಿಗೂ ನಡುವೆ ಸೂರ್ಯ ಮಂಡಲದಲ್ಲಿ ವಿಸ್ತಾರವಾದ ಬಿಡುವುಸ್ಥಲ ಇದ್ದುದನ್ನು ನೋಡಿ ಶಾಸ್ತ್ರಜ್ಞರು ಆಲೋಚಿಸ ತೊಡಗಿದರು. ಇಲ್ಲಿ ಗ್ರಹಗಳಿವೆಯೇನೋ ಎಂದು ಅನುಮಾನಪಟ್ಟರು. ದೂರದರ್ಶಕದ ಮೂಲಕ ಹಗಲೂ ಇರುಳೂ ಹುಡುಕಿದರು. ಗೆದ್ದರು. ಅವರ ಊಹೆಗಳು ನಿಜವಾದವು. ಚಿಕ್ಕ ಚಿಕ್ಕ ಗ್ರಹಗಳು ಕಾಣಿಸಿದವು?

'ಒಟ್ಟು ಎಷ್ಟಿರಬಹುದು?'

'ಇಲ್ಲಿಯುವರೆಗೆ ಸುಮಾರು ೧೭೦೦ರ ವರೆಗೂ ಕಂಡಿವೆ. ವರ್ಷ ವರ್ಷವೂ ಹೊಸ ಹೊಸವು ಕಾಣುತ್ತಲೇ ಇವೆ.'

'ಚಿಕ್ಕಚಿಕ್ಕದು ಎಂದಿರಿ. ಏನು ಗಾತ್ರವಿದ್ದೀತೋ?'

'ಅವುಗಳಲ್ಲಿ ಒಂದು ಮಾತ್ರ ಕಣ್ಣಿಗೆ ಕಾಣಬಹುದು ಅನ್ನುತ್ತಾರೆ. ಉಳಿದವನ್ನೆಲ್ಲ ದೂರದರ್ಶಕದೊಳಗಿಂದ ನೋಡಬೇಕಾದ್ದೇ. ಕೆಲವು, ಮೂಲೆಯಿಂದ ಮೂಲೆಗೆ ಅಳೆದರೆ ಅಡ್ಡಳತೆ ಮೂರು ಮೈಲಿ ಇವೆ.'

'ಇವುಗಳ ಆಕಾರ ಗೋಳವೆ ತಾನೆ?'

'ಹೌದು, ಈ ಗೋಳದಲ್ಲಿ ಮೂರು ಮೈಲಿಯಿಂದ ೫೦೦ ಮೈಲಿಯು ವರೆಗೆ ಅಡ್ಡಳತೆ ಉಳ್ಳವು ಇವೆ?'

'ಗ್ರಹಗಳಂತೆ ಇವು ಕೂಡ ಪ್ರದಕ್ಷಿಣೆ ಮಾಡುತ್ತವೆಯೆ ಸ್ವಾಮಿ?'

'ಹಾಂ, ಹಾಗೇ?'

‘ಇವುಗಳ ಹುಟ್ಟೋ? ಇವು ಇಷ್ಟು ನೂರಾರು ಆಗಿರಲಿಕ್ಕೆ ಕಾರಣ ವೇನು?’ ಮತ್ತೆ ಎಲೆ ಅಡಿಕೆ ಬಾಯಿಗೆ ಸೇರಿಸಿದ.

‘ಶಾಸ್ತ್ರಜ್ಞರು ಹೀಗೆ ಹೇಳುತ್ತಾರೆ: ಅಂಗಾರಕನಿಗೂ ಬೃಹಸ್ಪತಿಗೂ ನಡುವೆ ಯಾವಾಗಲೋ ಒಂದು ದೊಡ್ಡ ಗ್ರಹ ಇದ್ದಿರಬೇಕು, ಈ ಗ್ರಹ ಒಡೆದು ಚಿಕ್ಕ ಚಿಕ್ಕ ತುಂಡುಗಳಾಗಿರಬೇಕು ಎನ್ನುತ್ತಾರೆ?’

‘ಇವು ಇಷ್ಟು ಚಿಕ್ಕವು. ಪಕ್ಕದಲ್ಲೇ ಆ ದೊಡ್ಡ ಬೃಹಸ್ಪತಿ. ಇದಕ್ಕೆ ಹೆಸರು ಇಟ್ಟಿದಾರೆಯೆ?’

‘ಉಪಗ್ರಹ ಸಮಿತಿ ಅನ್ನುತ್ತಾರೆ, ತಾತ.’

‘ಮೇಷ್ಟ್ರೆ, ಭೂಮಿಗಿಂತ ಎಷ್ಟು ದೊಡ್ಡದು ಬೃಹಸ್ಪತಿ?’

‘೧೩ ನೂರು ಪಟ್ಟು ದೊಡ್ಡದು. ನಮ್ಮ ಭೂಮಿ ಕಡಲೆಕಾಳು ಅಂದರೆ ಇದು ಒಂದು ಗಜನಿಂಬೆ ಎಂದುಕೋ ಸುಬ್ಬ. ಗುರುಗ್ರಹದಲ್ಲಿರುವ ಪದಾರ್ಥದಿಂದ ೩೧೭ ಭೂಗ್ರಹಗಳನ್ನು ಮಾಡಬಹುದು?’

‘ಅಷ್ಟು ದೊಡ್ಡದೇ?’

‘ಆದರೂ ವಿಚಿತ್ರವೇನು ಗೊತ್ತೆ? ಈ ಪದಾರ್ಥವೆಲ್ಲ ವಾಯುರೂಪದಲ್ಲಿ ಇದೆ?’

‘ಭೂಗೋಳದಂತೆ ಗಡ್ಡೆ ಕಟ್ಟಿಲ್ಲವೆ?’

‘ಇಲ್ಲ ತಾತ. ಆದ್ದರಿಂದಲೇ ಬೃಹಸ್ಪತಿಯು ಭ್ರಮಣದಲ್ಲಿ ಒಂದು ವಿಲಕ್ಷಣತೆಯಿದೆ.’

‘ಭ್ರಮಣ ಎಂದರೆ...........ಮರೆತೆ, ಮತ್ತೆ ಹೇಳಿ ಸ್ವಾಮಿ.’

‘ಭ್ರಮಣ ಎಂದರೆ ಗ್ರಹ ತನ್ನ ಸುತ್ತಲೂ ತಾನು ತಿರುಗುವುದು. ಬೃಹಸ್ಪತಿ ೯ಗಂಟೆ ೫೫ನಿಮಿಷದಲ್ಲಿ ಒಂದು ಭ್ರಮಣ ಮುಗಿಸುತ್ತಾನೆ. ಮಹಾ ವೇಗವಾಗಿ ತಿರುಗುತ್ತಿದಾನೆ.’

‘ಈ ವಾಯುರೂಪ, ಇದೆಲ್ಲ ನೋಡಿದರೆ ಗುರುವೂ ಸೂರ್ಯನ ಹಾಗೇ ಇಲ್ಲವೆ ಮೇಷ್ಟ್ರೆ?’

‘ಆದರೆ ಗುರುಗ್ರಹಕ್ಕೆ ಸ್ವತಃ ಕಾಂತಿಯುಲ್ಲ ಸುಬ್ಬ. ಬಿಸಿ ಕೂಡ ಸ್ವಲ್ಪವೇ.’

‘ಅಯ್ಯ, ಶನಿ ಬೃಹಸ್ಪತಿ ಎರಡೂ ಗುರುಗ್ರಹಗಳೆನ್ನಲಿಲ್ಲವೆ?’

'ಹೌದು ತಾತ, ಇವೆಲ್ಲ ಸೂರ್ಯ ಕುಟುಂಬದಲ್ಲಿ ದೊಡ್ಡವು–ಯುಮನ ವಿನಾ. ಎಲ್ಲವೂ ವಾಯುದಶೆಯಲ್ಲಿಯೇ ಇವೆ. ಸೂರ್ಯನಿಗೆ ಬಹಳ ದೂರ ವಾಗಿವೆ. ಇವುಗಳ ವರ್ಷ ಬಹಳ ದೀರ್ಘ.'

'ಬೃಹಸ್ಪತಿಯ ದಿನವನ್ನೇನೊ ಹೇಳಿದಿರಿ, ವರ್ಷಮಾನವನ್ನು ಹೇಳ ಲಿಲ್ಲ.'

'ನಮ್ಮ ವರ್ಷದ ಲೆಕ್ಕಕ್ಕೆ ೧೨ ವರ್ಷ.'

'ಅಬ್ಬ, ಎಲ್ಲದರಲ್ಲೂ ಭಾರಿಯೇ !'

'ಪಟದಲ್ಲಿ ಶನಿ ಗ್ರಹದ ಸುತ್ತಲೂ ಯಾವುದೋ ಚಕ್ರವಿರುತ್ತದೆ ಯಲ್ಲ. ಅದೇನು ಮೇಷ್ಟ್ರೆ ?'

'ಚಕ್ರವೇನು ಬಂತು ದೇವರು ?'

'ಇಕೊ, ಹೀಗೆ ಇರುತ್ತದೆ ತಾತ. ನೆಲದಮೇಲೆ ಶನಿಗ್ರಹದ ಚಿತ್ರ ಬರೆದೆ.



ಶನಿ – ಉಪಗ್ರಹ ಚಕ್ರಗಳು

'ವಾಸ್ತವವಾಗಿ ಇವು ಮೂರು ಚಕ್ರ. ಒಂದಾನೊಂದು ಕಾಲ ದಲ್ಲಿ ಶನಿಗ್ರಹಕ್ಕೆ ಒಂದು ಉಪ ಗ್ರಹವಿತ್ತಂತೆ. ನಮ್ಮ ಭೂಮಿಗೆ ಚಂದ್ರ ಇದ್ದಹಾಗೆ. ಅದೇ ತುಣುಕು ತುಣುಕಾಗಿ ಹೀಗೆ ಈ ಗ್ರಹ ಸಮೂಹವಾಗಿ ಗುಂಪಾಗಿ ಏರ್ಪಟ್ಟು ತಿರುಗುತ್ತಾ ಇದೆ ಶನಿಯ ಸುತ್ತಲೂ.'

'ಇವೂ ನೂರುಗಟ್ಟಲೆಯೇ ?'

'ಹೌದು. ಆದರೆ ವಾಸ್ತವವಾಗಿ ಶನಿಗೆ ೯ ಜನ ಚಂದ್ರರು ?'

'ಕುಂಟನಲ್ಲವೆ ಸ್ವಾಮಿ ಶನಿ ? ದಕ್ಷಯಜ್ಞದಲ್ಲಿ ವೀರಭದ್ರನ ಹೊಡೆ ತಕ್ಕೆ ಕಾಲು ಮುರಿಯಿತು.'

'ಅದೇನೋ, ಅಂತೂ ಬಹಳ ಮಂದ, ಮಹಾ ಮಂದ ಈತನ ನಡೆ. ಕ್ಷಣಕ್ಕೆ ೬ ಮೈಲಿ ವೇಗದಿಂದ ಕುಂಟುತ್ತ ಕುಂಟುತ್ತ ೨೯ ೧/೨ ವರ್ಷಕ್ಕೆ ಒಂದು ಸಲ ಸೂರ್ಯ ಪ್ರದಕ್ಷಿಣೆ ಮಾಡುತ್ತಾನೆ.'

'ಗಾತ್ರದಲ್ಲಿ ಬೃಹಸ್ಪತಿಯಷ್ಟೆ ?'

'ಇಲ್ಲ. ಭೂಮಿ ಕಡಲೆಕಾಳಾದರೆ ಶನಿ ನೆಲ್ಲಿಕಾಯಿ ?'

'ವಾಯು ದಶೆಯಲ್ಲೇ ಇದೆಯಲ್ಲವೆ ?'

'ಹೌದು. ಬೆಂಡಿನಹಾಗೆ ಇದೆ ಶನಿಗ್ರಹದಲ್ಲಿರುವ ವಾಯುಪದಾರ್ಥ. ಗ್ರಹಗಳಲ್ಲೆಲ್ಲ ವಿಚಿತ್ರ ಗ್ರಹ ಇದು. ನೀರಿನಲ್ಲಿ ತೇಲುತ್ತದಂತೆ, ಈ ಗ್ರಹ ವನ್ನು ಹೊರಬಲ್ಲ ದೊಡ್ಡ ಸಮುದ್ರ ಒಂದು ಇದ್ದರೆ.'

'ಬಲು ತಮಾಷೆಯಾಗಿದೆ. ಈ ಶನಿಯ ದಿನಮಾನವೇನು ?'

'೧೦ ಗಂಟೆ ೧೪ ನಿಮಿಷ.'

'ಆದರೇನು ? ಹಿಡಿದರೆ ಏಳುವರ್ಷದ ತನಕ ಬಿಡ.' —ಮತ್ತೆ ಚಮ ತ್ಕಾರ.

'ಮೇಷ್ಟ್ರೆ, ಬೃಹಸ್ಪತಿಯಲ್ಲಿದ್ದ ಹಾಗೇ ಇದೆಯೆ ಶನಿಯೊಳಗೆ ಬಿಸಿ ?'

'ಹೌದು ಸುಬ್ಬ. ಶನಿ ಬೃಹಸ್ಪತಿ ಈ ಎರಡು ಗೋಳಗಳಲ್ಲೂ ಮಧ್ಯ ಭಾಗ ಗಡ್ಡೆ ಕಟ್ಟಿರಬೇಕೆಂದು ಕೆಲವರು ಶಾಸ್ತ್ರಜ್ಞರ ಅಭಿಪ್ರಾಯ. ಅದರ ತರುವಾಯ ಮಂಜಿನ ತೆರೆಯಿದೆ ಎನ್ನುತ್ತಾರೆ. ದಟ್ಟವಾಗಿದೆಯಂತೆ ತೆರೆ.'

'ಇವುಗಳ ಸುತ್ತ ಗಾಳಿ ಏನಾದರೂ ಇದೆಯೆ ?'

'ಇದೆ. ಬೃಹಸ್ಪತಿಯ ಸುತ್ತಲೂ ಬಹಳ ದಟ್ಟವಾಗಿ ಇದೆ. ಆದರೆ ಪ್ರಾಣಿಗಳು ಬದುಕಲಿಕ್ಕೆ ಈ ಗಾಳಿ ಉಪಯೋಗವಿಲ್ಲ. ಅದರ ತುಂಬ ವಿಷವಾಯುಗಳಿವೆ.'

ಜಂಗುಳಿಯಿಂದ ಸರಿಯಾಗಿ ಮನೆಗೆ ಬಾರದೆ ತಪ್ಪಿಸಿಕೊಂಡಿದ್ದ ಹಸು ಹೊರಗಡೆ ಬಂದು ನಿಂತು ಅಂಬಾ ಎನ್ನುತ್ತಿದೆ. ತಿಮ್ಮಯ್ಯ ತಾತ ಮೇಲಕ್ಕೆ ಎದ್ದ. 'ಬಂದೆಯಾ ತಾಯಿ, ಮಹಾಲಕ್ಷ್ಮಿ ಬಾ' ಎನ್ನುತ್ತ ಬಾಗಿಲಬಳಿ ಹೋದ.

'ಆಮೇಲೆ ಇರುವವರು ಇಂದ್ರ, ವರುಣ, ಯಮ ಅಲ್ಲವೆ ?'

'ಹೌದು. ಇಂದ್ರನೂ ವರುಣನೂ ಪದಾರ್ಥಸ್ಥಿತಿಯಲ್ಲಿ ಬೃಹಸ್ಪತಿ ಶನಿಗಳ ಹಾಗೇ ಇದಾರೆ.'

ತಾತ ಹಸುವನ್ನು ಕಟ್ಟಿಹಾಕಿ ಬಂದ.

'ಇವರಲ್ಲಿ ದಿನ, ವರ್ಷ ಕೂಡ ಬೇರೆಬೇರೆ ಅಲ್ಲವೆ ?'

'ಹೂಂ. ಇಂದ್ರನ ಭ್ರಮಣಕಾಲ ಶನೀಶ್ವರನಿಗಿಂತ ಅರ್ಧಗಂಟೆ ಹೆಚ್ಚು. ವರುಣನಿಗೆ ೧೫ ಗಂಟೆ ೪೦ ನಿಮಿಷ. ಯಮ ಬಹಳ ದೂರದಲ್ಲಿ ದಾನೆ. ತಿಳಿಯುವಂತೆ ಇಲ್ಲ.'

'ಇವರ ವರ್ಷಮಾನವೋ ?'

'ಇಂದ್ರ-೮೪ ; ವರುಣ-೧೬೫ ; ಯಮ-೨೪೮.'

ತಿಮ್ಮಯ್ಯ ಮೂಗಿನ ತುದಿಯ ಮೇಲೆ ಬೆರಳೇರಿಸಿ ಕಣ್ಣು ಹಾರಿಸುತ್ತ ಆಶ್ಚರ್ಯವನ್ನು ತೋರಿಸಿದ.

'ಏನು ಅಚ್ಚರಿ; ನಮ್ಮ ಮುತ್ತಾತನ ಕಾಲದಲ್ಲಿ ಈ ಯಮ ಸವಾರಿ ಹೊರಟಿದ್ದರೆ ಈಗ ಆ ಮೊದಲ ಮನೆಗೆ ಬಂದು ಸೇರಿರಬಹುದು!'

'ಇವುಗಳ ಗಾತ್ರವೋ ?'

'ಇಂದ್ರನೂ ವರುಣನೂ ದೊಡ್ಡ ನೆಲ್ಲಿಕಾಯಿ, ಯಮನ ಸಂಗತಿ ದೃಢವಾಗಿ ತಿಳಿಯದು.'

'ಅಯ್ಯೋ, ಇವರಿಗೆ ಚಂದ್ರರಿದಾರೆಯೆ?'

'ಇಂದ್ರನಿಗೆ ನಾಲ್ವರು, ವರುಣನಿಗೆ ಒಬ್ಬ.'

ಒಳಗಿಂದ ಗಂಗೆ ಕಣ್ಣೆ ಹರಿದುಕೊಂಡು ಬಂತು. ತಾತ ಎದ್ದು ಹೋಗಿ ಹಸುವನ್ನು ಕಟ್ಟಿಹಾಕಿ ಬಂದ.

'ಸ್ವಾಮಿ, ಹೊತ್ತಾಯಿತು ; ಹೋಗಿಬರುತ್ತೇನೆ. ನಾಳೆ ಭೂದೇವಿಯ ಸಂಗತಿ ಹೇಳಬೇಕು. ಆಕೆಯ ಬಸಿರೊಂದೇ ಫಲಿಸಿದ್ದು.'

---

## ೬

## ಅರಸಿನವರ ಜೊತೆಗಾರರು—ಉಲ್ಕ, ಧೂಮಕೇತು

‘ ಶರ್ವರೀ ನೀಲ ಕೇಶದಾ ಪಾಶದಿಂದ
ಜಾರಿದವು ಕೋಟಿ ತಾರಕಾ ಕೋರಕಗಳು ’—.

ಪಡಸಾಲೆಯಲ್ಲಿದೀಪದ ಬಳಿ ಏನೋ ಓದುತಾ ಇದ್ದೆ.

ಸುಬ್ಬ ಸುರುಸುರು ಬಾಣವೊಂದನ್ನು ಬಿಟ್ಟ. ದೀಪಾವಳಿಯಲ್ಲಿ ಸುಟ್ಟು ಮಿಗಿಸಿ ಇಟ್ಟುಕೊಂಡದ್ದು. ಆ ಬಾಣ ಮೇಲೆಹೋಗಿ ಒಡೆದು, ಕುಡಿಕೆಯಿಂದ ಕಿಡಿ ಹಾರಿ, ಚಿಕ್ಕೆ ಚಿಕ್ಕೆಗಳಾಗಿ ಧಾರೆ ಧಾರೆಯಾಗಿ, ಹೂವಿನ ಪುಟ್ಟಿಯನ್ನು ಸುರಿದಂತೆ ಸುರಿಯಿತು.

‘ ಭಲೆ ಭಲೆ ! ಓಹೋ ಹೋ ! ಏನು ಬಣ್ಣ ........ಏನು ಚಿಕ್ಕೆ ! ’ ತಿಮ್ಮಯ್ಯ ಬಾಗಿಲ ಬಳಿ ನಿಂತು ನೋಡುತ್ತಿದಾನೆ.

ಇನ್ನೊಂದು ಬಾಣ ಹಾರಿತು. ಇದು ಇನ್ನೊಂದು ತರದ್ದು. ಒಂದೇ ಒಂದು ದೊಡ್ಡ ಕಿಡಿ – ಕೆಂಡವಾಗಿ ಕೆಳಗೆ ಬಿತ್ತು. ತಿಮ್ಮಯ್ಯ ಪಡಸಾಲೆಯ ಅಂಚಿನಲ್ಲಿ ಕೂತ.

ಮುಗಿಲಿನಿಂದ ಒಂದು **ಉಲ್ಕ** ಉದುರಿ ಬಿತ್ತು.

‘ ಇದನ್ನು ನೋಡಿದಿರಾ ದೇವರು. ಈ ಚಿಕ್ಕೆ ಹೇಗೆ ಉದುರಿ ಬಿತ್ತೋ ! ಹೀಗೆ ಚಿಕ್ಕೆ ಉದುರೋದನ್ನು ವಾರವಾರವೂ ನಾನು ನೋಡುತ್ತೇನೆ. ಹೀಗೆ ಉದುರಿಬಿದ್ದರೆ ಕಡೆಗೆ ಈ ಚಿಕ್ಕೆಗಳೆಲ್ಲ ಏನಾಗುತ್ತವೆಯೋ ? ’

‘ ಇವು ಚಿಕ್ಕೆಗಳೇ ಅಲ್ಲ ತಾತ. ಇವನ್ನು **ಉಲ್ಕ** ಅನ್ನುತ್ತಾರೆ.’

‘ ಏನು .... ಚಿಕ್ಕೆಗಳಲ್ಲವೆ ? ಇವು ಬೇರೇನೆ ? ಎಲ್ಲಿ, ಇವುಗಳ ಸಮಾಚಾರ ಕೇಳೋಣ. ಆಮೇಲೆ ಭೂಮಿದೇವಿ ಕಥೆ ಹೇಳ್ತೀರಂತೆ. ಇವೊತ್ತು ಅದನ್ನು ಕೇಳಬೇಕು ಎಂತ ಬಂದೆ.’

‘ಇವು ಹೀಗೆ ಉದುರುತ್ತಲೇ ಇರುತ್ತವೆ, ತಾತ. ನಮ್ಮ ಭೂಮಿಗೆ ನೂರು ಮೈಲಿ, ಎಪ್ಪತ್ತು ಮೈಲಿ ದೂರದಲ್ಲಿ ಗಾಳಿಯೊಳಗೆ ಹೋಗುತ್ತವೆ.’

‘ಎಲ್ಲಿಂದ ಬರುತ್ತವೆಯೋ ?’

‘ಸೂರ್ಯಮಂಡಲದಲ್ಲಿ ಗ್ರಹಕ್ಕೂ ಗ್ರಹಕ್ಕೂ ನಡುವೆ ಬಿಡುವಾದ ಸ್ಥಳ ಇಲ್ಲವೆ. ನೆನಪಿದೆಯೆ ?.... ಅಲ್ಲಿ. ಈ ಉಲ್ಕಗಳು ಮರಳಿನ ಕಣಗಳಂತೆ ಸಾವಿರ ಗಟ್ಟಲೆ ಕೆಲವು, ದೊಡ್ಡವು ಕೆಲವು ಇವೆ. ಕೆಲವು ನಮ್ಮ ಈ ಪಟ್ಟಣದ — ಸೂರ್ಯಮಂಡಲದ – ಹೊರಗಡೆಯಿಂದ, ಎಂದರೆ ಖಗೋಳದಲ್ಲಿ ಬೇರೆ ಕಡೆಗಳಿಂದ ನಮ್ಮ ಪಟ್ಟಣಕ್ಕೆ ಬರುತ್ತಿವೆ ಎನ್ನುತ್ತಾರೆ.’

ಮತ್ತೊಂದು ಉಲ್ಕ ಬಿತ್ತು.

‘ಇವು ನಮ್ಮ ಗಾಳಿಯ ಪರೆಯೊಳಕ್ಕೆ ಬರುತ್ತವೆಯೋ ? ಬಂಧ ಮೇಲೆ ?’

‘ಗಾಳಿಯಲ್ಲಿ **ಪ್ರಾಣವಾಯು** ಇದೆ ಎಂತ ಹೇಳಿದ್ದೆ, ನೆನಪಿದೆಯೆ ?’

‘ಹೂಂ.... ನಾವು ಎಳೆದುಕೊಳ್ಳುವ ಗಾಳಿ. ನಮ್ಮ ಪ್ರಾಣವನ್ನು ಕಾಪಾಡೋದು.’

‘ಅದೇ.... ಯಾವ ಪದಾರ್ಥ ಸುಡಬೇಕಾದರೂ ಈ ಗಾಳಿಯೇ ಕಾರಣ. ಒಂದು ಸೀಸೆಯಲ್ಲಿ ಊದುಬತ್ತಿ ಇಟ್ಟು, ಸೀಸೆಯ ಬಾಯಿ ಮುಚ್ಚಿ ಬಿಡು. ಬತ್ತಿ ಸ್ವಲ್ಪ ಹೊತ್ತು ಉರಿದು ಆಮೇಲೆ ನಂದಿಹೋಗುತ್ತದೆ.’

‘ಅದೇನು ?’

‘ಬತ್ತಿ ಉರಿಯಲು ಪ್ರಾಣವಾಯು ಬೇಕು. ಸೀಸೆಯೊಳಗಿದ್ದ ಪ್ರಾಣವಾಯು ಬತ್ತಿಯನ್ನು ಉರಿಸುತ್ತದೆ. ಸ್ವಲ್ಪ ಹೊತ್ತಿಗೆ ಅದೆಲ್ಲಾ ಮುಗಿದುಹೋಗುತ್ತದೆ. ಅದರಿಂದ ಬತ್ತಿ ಆರಿಹೋಗುತ್ತದೆ. ಹೀಗೆ ಈ ಉಲ್ಕಗಳು ಗ್ರಹಗಳ ಮಧ್ಯದಿಂದಲೋ ಸೂರ್ಯಮಂಡಲದ ಹೊರಗಿನಿಂದಲೋ ನಮ್ಮ ವಾತಾವರಣದೊಳಕ್ಕೆ ಬಂದಕೂಡಲೇ – ಅವಕ್ಕೂ ಗಾಳಿಗೂ ಕುಸ್ತಿ ! ಕಡ್ಡೀ ಕಡ್ಡೀ ಉಜ್ಜಿದರೆ ಅದರಿಂದ ಬೆಂಕಿ ಹುಟ್ಟದೆ? ಹಾಗೇ. ಈ ಉಲ್ಕಗಳು ಉಜ್ಜಿಕೊಂಡು ಪ್ರಾಣವಾಯುವಿನೊಡನೆ ಬೆರೆತು ಭಗ್ಗೆಂದು ಬೆಳಗುತ್ತವೆ. ಉರಿದು ಸುಟ್ಟುಹೋಗುತ್ತವೆ. ಭೂಮಿಗೆ

೪೦–೫೦ ಮೈಲಿ ಹತ್ತಿರಕ್ಕೆ ಬರುವ ಹೊತ್ತಿಗೆ ನಾಶವಾಗಿ ಹೋಗುತ್ತವೆ.'

'ಭೂಮಿಯ ಮೇಲೆ ಬೀಳದೇನು ಹಾಗಾದರೆ ?'

'ಇದರಲ್ಲಿ ಎರಡು ಬಗೆ ಇವೆ. ಒಂದು ಬಗೆ, ಈಗ ಹೇಳಿದೆನಲ್ಲ ಅಂಥವು. ಇವು ೩೦ ಮೈಲಿ ದೂರದಲ್ಲೇ ಬೂದಿಯಾಗಿ ಹೋಗುತ್ತವೆ. ಬಹಳ ಚಿಕ್ಕವು, ಮರಳಿನ ಕಣದಂತೆ – ಕಡಲೆಕಾಳಿನಂತೆ ಆ ಬಗೆ.' ಎರಡನೆಯ ಬಗೆ ಬಹಳ ದೊಡ್ಡವು. ಕೆಲವು ಮಣ ತೂಕ ಇರುತ್ತವೆ.'

'ಏನು, ಮಣಗಳೇ ?'

'ಹೌದು. ಈ ದೊಡ್ಡ ಉಲ್ಕಗಳು ನಮ್ಮ ವಾತಾವರಣದಲ್ಲಿ ಪೂರ್ತಿಯಾಗಿ ಸುಟ್ಟು ಬೂದಿಯಾಗವು. ಸ್ವಲ್ಪ ಸುಟ್ಟು, ಉಳಿದದ್ದು ಭೂಮಿಯ ಮೇಲೆ ಬಿದ್ದ ತರುವಾಯ ....'

'ಇಂಥ ಕಲ್ಲು ಸಿಕ್ಕಿದೆಯೆ ಎಲ್ಲಾದರೂ ?'

'ಒಂದೇ ಎರಡೇ! ನಮಗೆ ತಿಳಿದ ಹಾಗೆ ಸುಮಾರು ಒಂದು ನೂರು ವರ್ಷಗಳಿಂದ ಇಂಥಾ ಕಲ್ಲು ಭೂಗೋಳದಲ್ಲಿ ಅನೇಕ ಕಡೆ ಸಿಗುತ್ತಿವೆ. ಸರಾಸರಿ ವರ್ಷಕ್ಕೆ ನಾಲ್ಕು! ಏಳೆಂಟು ನೂರು ಮಣ ಭಾರದವು ಬಿದ್ದಿವೆ. ಕಾಶಿಯಲ್ಲಿ ಒಬ್ಬ ಮನುಷ್ಯ ಉಲ್ಕ ಬಿದ್ದು ಸತ್ತ. ಅಮೆರಿಕಾದಲ್ಲಿ ಉಲ್ಕಾಪಾತದಿಂದ ಒಂದು ಕಡೆ ದೊಡ್ಡ ತಗ್ಗು ಬಿತ್ತು – ೬೦೦ ಅಡಿ ಆಳ, ೪೦೦೦ ಅಡಿ ಅಗಲದ ತಗ್ಗು. ರಷ್ಯಾದಲ್ಲಿ ಒಂದು ದೊಡ್ಡ ಅಡವಿ ಧ್ವಂಸವಾಗಿ ಹೋಯಿತು.'

'ಇದೆಲ್ಲ ಮತ್ತೆ ರಾವಣ ಕುಂಭಕರ್ಣರ ಕತೆಯೇ ಆಯಿತು. ಹೋಗಲಿ, ಈ ಕಲ್ಲು ನಮ್ಮ ಸಾಧಾರಣ ಕಲ್ಲಿನಂಥಾವೇ ಏನು ?'

'ಸಾಮಾನ್ಯವಾಗಿ ದೊಡ್ಡ ಗುಂಡು ಬಂಡೆಗಳಂಥವೇ. ಆದರೆ ಕೆಲವರಲ್ಲಿ ಕಬ್ಬಿಣ ಹೆಚ್ಚು.'

'ಏನು ಏನು! ಈ ಕಬ್ಬಿಣ ಬ್ರಹ್ಮಾಂಡದಲ್ಲೆಲ್ಲಾ ಇದೆಯಲ್ಲ! ಚಿಕ್ಕೆಗಳಲ್ಲಿ ಗ್ರಹಗಳಲ್ಲಿ – ಮತ್ತೆ ಇದರಲ್ಲಿ ಕೂಡಾನೆ ?'

'ಕಬ್ಬಿಣವೂ ಬೇರೆ ಲೋಹಗಳೂ ಇರುತ್ತವೆ. ಕೆಲವು ಉಲ್ಕಗಳಲ್ಲಿ ಕಲ್ಲೇ ಹೆಚ್ಚು.'

ಇನ್ನೊಂದು ಉಲ್ಕ ಬಿತ್ತು.

'ಇವು ದಿನಕ್ಕೆ ಎಷ್ಟು ಬೀಳುತ್ತವೆಯೋ? — ಅದೇ, ದಿನಕ್ಕೆ ಎಷ್ಟು ನಮ್ಮ ಗಾಳಿಯಲ್ಲಿ ಪ್ರವೇಶಿಸುತ್ತವೆಯೋ?'

'ದಿನಕ್ಕೆ ಹಲವು ಲಕ್ಷ ಉದುರಬಹುದು, ತಾತ. ಗಂಟೆಗೆ ಏಳೆಂಟರಿಂದ, ಕೆಲವು ರಾತ್ರಿ ೫೦–೬೦ರ ವರೆಗೂ ನಮ್ಮ ವಾತಾವರಣದಲ್ಲಿ ಪ್ರವೇಶಿಸುತ್ತವೆ. ಇವು ಆಕಾಶದ ಎಲ್ಲಾ ಮೂಲೆಗಳಿಂದಲೂ ಬರುತ್ತಿದ್ದ ಹಾಗೆ ಕಾಣುತ್ತಿವೆ. ಇವುಗಳಿಂದ ಭೂಗೋಳಕ್ಕೆ ಸ್ವಲ್ಪ ಲೋಹ ಲಾಭವಾಗುತ್ತ ಇದೆ.'

'ಎಷ್ಟು ಮಟ್ಟಿಗೆ?'

'೧೦೦ ಕೋಟಿ ವರ್ಷಕ್ಕೆ ಈ ಭೂಮಿ ೨ ಅಂಗುಲ ಹೆಚ್ಚಬಹುದು.'

ಸುಬ್ಬ ಇನ್ನೊಂದು ಬಿರುಸು ಬಿಟ್ಟ. 'ಅಕೊ, ಆ ಬಿರುಸಿನ ಹಾಗೆ ರೊಂಯ್ ಅಂತ ಬರುತ್ತವೆಯೋ?'

'ತಾತ, ಇವುಗಳ ವೇಗ ೨೫ರಿಂದ ೬೦ ಮೈಲಿಯವರೆಗೂ.'

ಬಿರುಸಿನ ಕಿಡಿಗಳು ಕಣ್ಣಿಗೆ ಅಂದವಾಗಿ ಸುರಿದವು.

'ಮಳೆಯ ಹಾಗೆ! ಇಷ್ಟು ಬಣ್ಣಗಳನ್ನು ಹೇಗೆ ತುಂಬಿಸಿದರೋ ಅದರಲ್ಲಿ.'

'ತಾತ, ಇನ್ನೊಂದು ಸಂಗತಿ. ಈ ಉಲ್ಕಗಳು ಸಾಮಾನ್ಯವಾಗಿ ಒಂದೊಂದಾಗಿ ಉದುರುತ್ತವೆಯಲ್ಲ. ಒಂದೊಂದು ಸಲ ಕೆಲವು ನೂರು ಉಲ್ಕಗಳು ದಬ ದಬ ಭೂಮಿಯ ಕಡೆಗೆ ಬರುತ್ತವೆ. ಮಳೆಯ ಹನಿಯ ಹಾಗೆ, ಈ ಬಿರುಸಿನ ಕಿಡಿಗಳಂತೆ – ಬಹಳ ಅಂದವಾಗಿ ಉದುರುತ್ತವೆ.'

'ಯಾವಾಗಲಾದರೂ ಕಾಣಿಸಿವೆಯೇ?'

'೧೧೦ ವರ್ಷದ ಕೆಳಗೆ ಹಾಗೆ ಒಂದು ಉಲ್ಕಾ ವರ್ಷ ಸುರಿಯಿತಂತೆ. ೫–೬ ಗಂಟೆ ಹೊತ್ತು ಹಲವು ಲಕ್ಷ ಉದುರಿದವಂತೆ. ಆಕಾಶದಲ್ಲಿ ಸಿಂಹ ರಾಶಿಯ ಹತ್ತಿರದಿಂದ ಒಂದು ಹೂಬುಟ್ಟಿ ಸುರಿದ ಹಾಗೆ ಸುರಿಯಿತಂತೆ. ೩೩ ವರ್ಷಕ್ಕೊಂದು ಸಲ ಇಂಥ ಮಳೆ ಬರುತ್ತದೆಂದು ಈಗ ಶಾಸ್ತ್ರಜ್ಞರು ಒಂದು ಲೆಕ್ಕ ಹಾಕಿದಾರೆ. ಇನ್ನೂ ಧೃಢವಾಗಿಲ್ಲ.'

'ನಮ್ಮ ಭೂಮಿಯ ಕಡೆಗೆ ಬರೋದಕ್ಕೆ ಮೊದಲು ಇವು ಸೂರ್ಯ ಮಂಡಲದೊಳಗೆ ಹೇಗಿರುತ್ತವೆಯೋ?'

'ಸೂರ್ಯನ ಸುತ್ತ ತಿರುಗುತ್ತಿರುತ್ತವೆ.'

'ಸರಿಬಿಡು. ಯಾವುದಕ್ಕೂ ಈ ಗತಿ ತಪ್ಪೋ ಹಾಗೆ ಇಲ್ಲವಲ್ಲ! ಇವುಗಳ ಪೂರ್ವೋತ್ತರ ಏನಾದರೂ ತಿಳಿದುಕೊಂಡಿದಾರೋ?'

'ಒಂದು ಊಹೆ ಮಾಡಿದಾರೆ. ಸೂರ್ಯನಿಂದ ಗ್ರಹಗಳು ಏರ್ಪಟ್ಟಾಗ ಸೂರ್ಯ ಪದಾರ್ಥದಲ್ಲಿ ಸ್ವಲ್ಪಭಾಗ ಗ್ರಹಗಳಾದವು. ಇನ್ನು ಸ್ವಲ್ಪ ಚಿಕ್ಕ ಚಿಕ್ಕ ತುಣುಕಾಗಿ ಉಳಿದುಹೋಯಿತು. ಗ್ರಹಗಳ ನಡುವೆ ಸೂರ್ಯಮಂಡಲ ದಲ್ಲಿ ನಿಂತುಹೋಯಿತು. ಇದರಲ್ಲಿ ಕೆಲವು ತುಣುಕೇ ಈ ಉಲ್ಕಗಳು. ಇವುಗಳಲ್ಲಿ ಕೆಲವು ಸೂರ್ಯಮಂಡಲದ ಹೊರಗಡೆಯಿಂದ ಕೂಡ ಬಂದಿರ ಬಹುದು. ಅಂದರೆ, ಕೆಲವು ನಮ್ಮ ಅರಸಿನವರ ಅನುಚರರು; ಕೆಲವರು ಅತಿಥಿಗಳು.'

ಸುಬ್ಬನೂ ಬಂದು ಕೂತ. ಸ್ವಲ್ಪ ಹೊತ್ತು ಸದ್ದಿಲ್ಲ. ತಾತ ಮತ್ತೊಂದು ವಿಷಯ ಎತ್ತಿದ.

'ಚಿಕ್ಕಂದಿನಲ್ಲಿ ಒಂದು ಸೋಜಿಗ ನೋಡಿದ್ದೆ. ಹನ್ನೆರಡು ವರ್ಷದ ಹೀಚು ನಾನು. ಒಂದು ಚಿಕ್ಕೆ; ಆ ಚಿಕ್ಕೆಗೊಂದು ಬಾಲ; ಆ ಬಾಲ ಆಕಾಶದಲ್ಲಿ ಉದ್ದಕ್ಕೂ ಸಾಗಿತ್ತು. ಆಗ ದೊರೆಗಳನ್ನು ಕೆಳಗಿಟ್ಟರಂತೆ. ಅವು ಕಾಣಿಸಿಕೊಂಡರೆ ಕೆಟ್ಟದ್ದಂತೆ.'

ತಂಬುಲ ಉಗುಳಿಬಂದ. ಏಳನೆ ಎಡ್ವರ್ಡ್ ಚಕ್ರವರ್ತಿ ಸಾಯು ವಾಗ ಕಂಡುಬಂದ ಬಾಲಚಿಕ್ಕೆಯ ಮಾತು ಹೇಳುತ್ತಿದಾನೆ.

'ಅದು ಬಾಲಚಿಕ್ಕೆಯಲ್ಲವೆ ಮೇಷ್ಟ್ರೆ? ೧೯೪೧ರಲ್ಲಿ ಕೂಡ ಅಂಥ ದೊಂದು ಕಾಣಲಿಲ್ಲವೆ?'

'ಹೌದಪ್ಪ. ಈ ಬಾಲಚಿಕ್ಕೆಗಳಿಗೂ ಉಲ್ಕಗಳಿಗೂ ಏನಾದರೂ ಸಂಬಂಧವಿದೆಯೆ ಎಂತ ಶಾಸ್ತ್ರಜ್ಞರು ಆಲೋಚಿಸುತ್ತಿದಾರೆ.'

'ಇವುಗಳಿಂದ ನಮಗೇನೂ ಆಪತ್ತು ಇಲ್ಲವಲ್ಲ ಸ್ವಾಮಿ?'

'ಬಾಲಚಿಕ್ಕೆ ಕಂಡರೆ ಅಶುಭ ಎಂತ ಅನಾದಿಯಾಗಿ ಈ ಭೂಮಿಯ ಜನರಲ್ಲಿ ನಂಬಿಗೆಯಿದೆ, ತಾತ. ಚೀನಾ, ಜಪಾನ್, ಭಾರತದೇಶ – ಈ ದೇಶಗಳಲ್ಲಿ ಈ ನಂಬಿಗೆಯಿದೆ. ಶಾಸ್ತ್ರರೀತ್ಯಾ ಇದಕ್ಕೇನೂ ಆಧಾರವಿಲ್ಲ.

ಆದರೆ ಒಂದು ಇದೆ – ಬಾಲಚಿಕ್ಕೆಯ ತಲೆಯೇನಾದರೂ ಭೂಮಿಗೆ ತಗುಲಿತ್ತೋ ಬಹಳ ದೊಡ್ಡ ಪ್ರಮಾದವೇ ಆದೀತು.'

'ಅಷ್ಟು ದೊಡ್ಡದೇ ಬಾಲಚಿಕ್ಕೆ?'

'ಈ ಖಗೋಳದಲ್ಲಿ ದ್ವೀಪ ಪ್ರಪಂಚಗಳ ಹೊರತು ಬಾಲಚಿಕ್ಕೆಗಳಷ್ಟು ದೊಡ್ಡವು ಮತ್ತೊಂದಿಲ್ಲ. ಲೆಕ್ಕಕ್ಕೆ ಸೂರ್ಯನಿಗಿಂತಲೂ ದೊಡ್ಡವು. ಆದರೆ ಇವುಗಳಲ್ಲಿನ ಪದಾರ್ಥದ ಅಣುಗಳು ಚದರಿ ಚೆಲ್ಲಾಪಿಲ್ಲಿಯಾಗಿವೆ. ಅಂದರೆ ವಾಯುದಶೆಯಲ್ಲಿವೆ. ಈ ಧೂಮಕೇತುವಿನಲ್ಲಿ ವಿಷವಾಯುಗಳು ಬಹಳ.'

'ಇವುಗಳ ತೂಕವನ್ನು ಕಂಡುಹಿಡಿದಿದಾರೆಯೆ?'

'ಕಂಡುಹಿಡಿದಿದಾರೆ ತಾತ. ೧೪ ಸಾವಿರದ ೪ ನೂರು ಕೋಟಿ ಮಣ ಇರಬಹುದು ಅನ್ನುತ್ತಾರೆ.'

'ಏನೋ ಸ್ವಾಮಿ, ಈ ಬಾಲಗಳೂ, ಈ ಚಿಕ್ಕೆಗಳೂ, ಈ ಲೆಕ್ಕಗಳೂ!'

'ಇವುಗಳ ಸಂಗತಿ ಅನೇಕ ದೇಶದವರಿಗೆ ಬಹುಕಾಲದಿಂದ ಗೊತ್ತಿದೆ, ಅಲ್ಲವೆ?'

'ಹೌದು. ಚೀನಾ ಜಪಾನ್ ದೇಶಗಳ ಪುರಾತನ ಗ್ರಂಥಗಳಲ್ಲಿ ಇವುಗಳ ವಿಷಯ ಇದೆ.'

'ಇವುಗಳ ಸಂಖ್ಯೆ ಎಷ್ಟೋ?'

'೨೦ ವರ್ಷದ ಕೆಳಗಿನತನಕ ನಮಗೆ ೯೦೦ರ ವರೆಗೆ ಲೆಕ್ಕ ಸಿಕ್ಕಿದ್ದವು. ವರ್ಷಕ್ಕೊಂದಾದರೂ ಕಾಣಿಸಬೇಕು ಎನ್ನುತ್ತಾರೆ ಶಾಸ್ತ್ರಜ್ಞರು. ನಾಲ್ಕೈದು ಕೂಡ ಇರುತ್ತವೆಯಂತೆ. ದೂರದರ್ಶಕದಿಂದ ಪ್ರತಿ ರಾತ್ರಿಯೂ ಒಂದು ಕಾಣಿಸುತ್ತದೆಯಂತೆ. ನೂರು ವರ್ಷದಲ್ಲಿ ಸಾವಿರ ಬಾಲಚಿಕ್ಕೆಗಳಾದರೂ ಸೂರ್ಯನ ಬಳಿಗೆ ಬರಬೇಕೆಂದು ಲೆಕ್ಕ ಹಾಕಿದಾರೆ.'

'ಓಹೋ! ಅಂದರೆ ಆ ಉಲ್ಕಗಳ ಹಾಗೆ ಇವು ಕೂಡ ಸೂರ್ಯನ ಸುತ್ತ ಪ್ರದಕ್ಷಿಣೆ ಮಾಡೋದಿಲ್ಲ ತಾನೆ?'

'ಅನುಮಾನವೇಕೆ? ಇವುಗಳ ಪಥ ಬಹಳ ವಿಚಿತ್ರವಾಗಿದೆ. ಒಂದು ಸಲ ಸೂರ್ಯನಿಗೆ ಬಹಳ ಹತ್ತಿರ, ಮತ್ತೊಂದು ಸಲ ಸೂರ್ಯನಿಗೆ ಬಹಳ ದೂರ. ಸೂರ್ಯನಿಗೆ ಬಹಳ ಹತ್ತಿರ ಬಂದಾಗ ಈ ಬಾಲ ಹುಟ್ಟುತ್ತದೆ.'

'ದೂರವಾಗಿದ್ದಾಗ ಬಾಲ ಇಲ್ಲವೆ, ಮೇಷ್ಟ್ರೆ?'

'ಇಲ್ಲ.'

'ಹಾಗಾದರೆ ಬಾಲಚಿಕ್ಕೆ ಹೇಗಾಗ್ತದೆ ಇದು?'

'ಬಾಲ ಇದ್ದರೇನೇ ಬಾಲಚಿಕ್ಕೆ, ಇಲ್ಲದಿದ್ದರೆ ಇಲ್ಲ ಅನ್ನುವ ಹಾಗಿಲ್ಲ ತಾತ. ದೂರದರ್ಶಕದಿಂದ ನೋಡಿದರೆ ನಕ್ಷತ್ರಕ್ಕೂ ಧೂಮಕೇತುವಿಗೂ ಇರುವ ಭೇದ ಚೆನ್ನಾಗಿ ತಿಳಿಯುತ್ತದೆ. ಸುಬ್ಬ–ನಿನ್ನ ಪುಸ್ತಕ ತಾ, ಸೀಸದ ಕಡ್ಡಿ ಕೊಡು. ಇಕೊ, ತಾತ, ದೂರದರ್ಶಕದಲ್ಲಿ ಬಾಲಚಿಕ್ಕೆ ಹೀಗೆ ಇರುತ್ತದೆ' — ಚಿತ್ರ ಬರೆದೆ.




ಚಿಕ್ಕೆ ಬರುವ ದಾರಿ

ಧೂಮಕೇತು–ಸೂರ್ಯನ ಸೆಳೆತ

'ಅದರ ಹೊಟ್ಟೆಯಲ್ಲಿ ಆ ಚುಕ್ಕೆ ಏನು ಮೇಷ್ಟ್ರೆ?'

'ಇದನ್ನು ಬಾಲಚಿಕ್ಕೆಯ **ಹೊಕ್ಕಳು** ಅನ್ನೋಣ. ಇದರ ಸುತ್ತಲೂ ಸ್ವಲ್ಪ ಪ್ರದೇಶ ಬೆಳ್ಳಗೆ ಇದೆ, ನೋಡು. ಕಾಂತಿ ಮೇಘಗಳಲ್ಲಿ ಥಳಥಳ ಹೊಳೆವ ಪದಾರ್ಥಗಳು ಈ ಬೆಳ್ಳಗಿರುವ ಕಡೆ ಇವೆ. ಇದನ್ನು **ಹೊಕ್ಕಳ ಹೊದಿಕೆ** ಅನ್ನೋಣ. ನಕ್ಷತ್ರಗಳಿಗೆ ಇಂಥದೇನೂ ಇಲ್ಲ.'

'ಮೇಷ್ಟ್ರೆ, ಸೂರ್ಯನ ಹತ್ತಿರದಲ್ಲಿ ಬಾಲ ಏಕೆ ಬರುತ್ತದೆ?'

ಚಿತ್ರ ಬರೆದೆ.

'ಸೂರ್ಯ ದೊಡ್ಡ ಅಯಸ್ಕಾಂತ ಗೋಳ. ಎಲ್ಲವನ್ನೂ ಸೆಳೆಯುತ್ತಾನೆ. ಖಗೋಳ ವೀಥಿಯಲ್ಲಿ ಸೂರ್ಯನ ಸೆಳೆತದ ನಿಲುಕಿಗೆ ಬಂತೋ ಇಲ್ಲವೋ ಈ ಸೆಳೆತ ಮೊದಲಾಗುತ್ತದೆ. ಬಾಲಚಿಕ್ಕೆಯ ಹೊಕ್ಕಳ ಹೊದಿಕೆಯೊಳಗಿನ ವಾಯುಗಳು ಸೂರ್ಯಕಾಂತಿಗೆ ಪ್ರತಿಬಿಂಬಿಸಿ ಥಳಥಳ ಹೊಳೆಯುತ್ತವೆ. ಈ ವಾಯುಪದಾರ್ಥಗಳು ಸೂರ್ಯನ ಸೆಳೆತಕ್ಕೆ ಉಕ್ಕುತ್ತವೆ; ಉಕ್ಕಿ ಬಾಲದ ಹಾಗೆ ಸಾಗುತ್ತವೆ.'

'ಸೂರ್ಯನ ಸೆಳೆತದಿಂದ ಬಾಲ ಹುಟ್ಟಿಕೊಂಡರೆ ಸೂರ್ಯನ ಕಡೆ ಇರ

ಬೇಕು ಬಾಲ. ಮತ್ತೆ ನೀವು ಬರೆದ ಚಿತ್ರದಲ್ಲಿ ಅದಕ್ಕೆ ವ್ಯತಿರೇಕವಾಗಿ ಇನ್ನೊಂದು ಪಕ್ಕದಲ್ಲಿದೆಯಲ್ಲ ಬಾಲ; ಯಾಕೆ ಮೇಷ್ಟ್ರೆ?'

ಅಬ್ಬ! ಒಳ್ಳೇ ಸಿಡಿಲು ಮರಿ. ತೊಡಕಿನ ಪ್ರಶ್ನೆಯನ್ನೆ ಹಾಕಿದ.

'—ಒಳ್ಳೇ ಪ್ರಶ್ನೆ ಕೇಳಿದೆ ಸುಬ್ಬ. ನಡೆಯುತಾ ಇರುವ ಸಂಗತಿ ಇದು. ಸೂರ್ಯ ನಿಜವಾಗಿ ಸೆಳೆಯುತ್ತಿಲ್ಲ. ಅದರ ಹೊಕ್ಕಳ ಹೊದಿಕೆಯಲ್ಲಿರುವ ವಾಯು ಪದಾರ್ಥವನ್ನು ಹಾರಿಸಿ ಚದರಿಸುತ್ತಿದಾನೆ. ಆದ್ದರಿಂದ ಬಾಲ ಹಾಗೆ ಆ ದಿಕ್ಕಿನಲ್ಲಿ ಸಾಗುತ್ತದೆ. ಸಣ್ಣ ಹೊಳೆಯು ಹಾಗೆ ಖಗೋಳ ವೀಧಿಯೊಳಕ್ಕೆ ಹರಿಯುತ್ತದೆ. ನೂರಾರು ಮೈಲಿ ಸಾಗಿ ಬಂದ ಬಾಲಗಳೂ ಕಂಡಿವೆ.'

'ಇವು ಸೂರ್ಯನ ಸುತ್ತಲೂ ತಿರುಗುತ್ತಿವೆಯಲ್ಲ. ಇವುಗಳ ವರ್ಷಮಾನವೋ?'

'ಗ್ರಹಗಳ ಸಂಗತಿ ಹೇಳಿದೆನೇ. ಇವುಗಳ ಕಥೆ ಅವನ್ನು ಮೀರಿಸಿದೆ. ಕೆಲವು ಒಂದೂವರೆ ವರ್ಷದಲ್ಲಿ ಒಂದು ಪ್ರದಕ್ಷಿಣೆ ಮಾಡುತ್ತವೆ. ಕೆಲವು ಸಾವಿರ, ಹತ್ತು ಸಾವಿರ ವರ್ಷದವರೆಗೂ.'

ತದೇಕ ಧ್ಯಾನದಿಂದ ದೀಪದ ಕಡೆ ನೋಡುತ್ತಿದಾನೆ.

'ಈ ಖಗೋಳದಲ್ಲಿ ಸೋಜಿಗಕ್ಕೆ ಇತಿ ಮಿತಿ ಇಲ್ಲದಹಾಗಿದೆ.'

ಸುಬ್ಬ ಕೇಳಿದ:

'ಬಾಲಚಿಕ್ಕೆ ಅಷ್ಟು ಭಾರವಾದರೆ ಅದು ಭೂಮಿಗೆ ತಗಲಿದರೆ ಅಪಾಯವಲ್ಲವೆ, ಮೇಷ್ಟ್ರೆ?'

'ಅದರಲ್ಲಿ ಅನುಮಾನವಿದೆಯೆ? ತುಂಡುತುಂಡಾಗಿ ಹೋಗುತ್ತೇವೆ. ಎಂಟು ಕೋಟಿ ವರ್ಷಕ್ಕೆ ಒಂದು ಸಲ ಬಾಲಚಿಕ್ಕೆಗಳು ಭೂಗೋಳವನ್ನು ತಗಲಬಹುದು ಅನ್ನುತ್ತಾರೆ ಶಾಸ್ತ್ರಜ್ಞರು. ಇನ್ನೊಂದು ಅಪಾಯವೂ ಇದೆ ಈ ಧೂಮಕೇತುವಿನಿಂದ. ಅದರ ಹೊಕ್ಕಳ ಹೊದಿಕೆಯ ವಿಷವಾಯುಗಳು ನಮ್ಮ ಗಾಳಿಯಲ್ಲಿ ಹೊಕ್ಕರೆ, ಭೂಗೋಳದಲ್ಲಿ ಪ್ರಾಣಿಗಳು ಬದುಕುವುದೇ ಕಷ್ಟವಾದೀತು. ಆದರೆ ಗಾಳಿಯಲ್ಲಿ ಸಾಕಷ್ಟು ಪ್ರಾಣವಾಯು ಇರುವುದರಿಂದ ಏನೂ ಭಯವಿಲ್ಲ ಎನ್ನುತ್ತಿದಾರೆ ಶಾಸ್ತ್ರಜ್ಞರು.'

'ಸ್ವಾಮಿ, ಈ ಬಾಲಚಿಕ್ಕೆಗಳು ನಮ್ಮ ಪಟ್ಟದವೇನೇ?'

‘ ಹೌದು. ಇವೂ ಸೂರ್ಯಮಂಡಲದೊಳಗಿನವೇ. ಒಂದು ಸಂಗತಿ ಹೇಳಲು ಮರೆತೆ. ಈ ಬಾಲಚುಕ್ಕೆಗಳು ಬಹಳ ಮಟ್ಟಿಗೆ ಬೃಹಸ್ಪತಿಗೆ ಹತ್ತಿರವಾಗಿವೆ. ಆತನ ಅನುಚರರು ಅನ್ನಬಹುದು. ಹೀಗೇ ಶನಿಗೆ ಇಬ್ಬರು ಅನುಚರರು ಇದಾರೆ. ವರುಣನಿಗೆ ಆರು ಜನ. ಇಂದ್ರನಿಗೆ ಇಬ್ಬರು.’

‘ ಭೇಷ್ ! ಮತ್ತೆ ಶುಕ್ರಾಚಾರ್ಯರಿಗೆ, ಅಂಗಾರಕನಿಗೆ ? ’

‘ ಅವರಿಗೆ ಯಾರೂ ಇಲ್ಲ. ಪೃಥಿವೀಗ್ರಹಕೂಟದ ಹಿಂಭಾಗದಲ್ಲಿ ಗುರುಗ್ರಹಗಳ ನಡುವೆ ಇರುವ ಬಿಡುವಿನಲ್ಲಿ ಇವೆ ಈ ಬಾಲಚುಕ್ಕೆಗಳು. ಅವುಗಳಲ್ಲಿ ಕೆಲವನ್ನು ಈ ಗ್ರಹಗಳು ಸೆಳೆದು ತಮ್ಮ ಮನೆಗಳಲ್ಲಿ ಇಟ್ಟಿವೆ. ಎಲ್ಲರೊಳಗೆ ಬಲಶಾಲಿ, ಯುವರಾಜ – ಬೃಹಸ್ಪತಿಗೆ ಅನುಚರವರ್ಗ ಹೆಚ್ಚು.’

ಸುಬ್ಬ ನಗುತ್ತಿದಾನೆ.

‘ ಬಲೇ ತಮಾಷೆಯಾಗಿ ಹೇಳ್ತೀರಿ ಮೇಷ್ಟ್ರೆ.’

ನಮ್ಮ ಶಿಷ್ಯನೇನೊ ಮೆಚ್ಚಿದ. ಓದುಗರು ಏನು ಹೇಳುತ್ತಾರೋ ಮತ್ತೆ !

‘ ಬಾಲಚುಕ್ಕೆಗಳಲ್ಲಿ ಕೆಲವು ನಮ್ಮ ರಾಜಧಾನಿಯಿಂದ ಪರಾರಿಯಾದ ಹಾಗೆ ಸ್ವಲ್ಪ ಸಂದೇಹವಾಗಿದೆ. ನಮ್ಮ ಸೂರ್ಯಮಂಡಲದಿಂದ ಬೇರೆ ನಕ್ಷತ್ರ ಮಂಡಲಗಳಿಗೆ ಕೆಲವು ಲಕ್ಷ ವರ್ಷಗಳಿಗೆ ಯಾವುದೋ ಒಂದು ಧೂಮಕೇತು ಹೋಗುತ್ತಿರಬಹುದು.’

ಇನ್ನೊಂದು ಉಲ್ಕೆ ಉದುರಿತು.

‘ ಮೇಷ್ಟ್ರೆ, ಈ ಉಲ್ಕೆಗಳಿಗೂ ಬಾಲಚುಕ್ಕೆಗಳಿಗೂ ಏನಾದರೂ ಸಂಬಂಧವಿದೆಯೆ ? ’

‘ ಧೂಮಕೇತು ಕಾಣಿಸಿಕೊಳ್ಳುವುದಕ್ಕೂ ಉಲ್ಕಾಪಾತಕ್ಕೂ ಹತ್ತಿರ ಸಂಬಂಧವಿದ್ದಂತೆ ಇದೆ. ಈ ವಿಷಯವಾಗಿ ಪರಿಶೋಧನೆಗಳಿನ್ನೂ ಪೂರ್ತಿಯಾಗಿಲ್ಲ.’

ತಾತ ಎದ್ದ.

‘ ಇವುಗಳ ಕಥೆ ಚೋದ್ಯವಾಗೇ ಇದೆ. ಇನ್ನೊಂದು ಸಲ ಭೂದೇವಿಯ ಕಥೆ ಹೇಳಿ, ಸ್ವಾಮಿ – ಅದೇ ತಾನೆ ಬಂಡವಾಳ ! ’

—❀—

೭

## ಒಬ್ಬಳೇ ಒಬ್ಬಳು ಮಗಳು
## — ಭೂದೇವಿ (ಅ)

ಸುಬ್ಬ ಯಾವುದೋ ಪದ್ಯ ಓದುತ್ತಿದಾನೆ.

ಪಡಸಾಲೆಯಲ್ಲಿ ವಲ್ಲಿ ಹಾಸಿಕೊಂಡು ತಿಮ್ಮಯ್ಯ ಕೂತಿದಾನೆ. ಒಳಗಡೆ ಫಲಾಹಾರ ಮಾಡುತ್ತಾ ನಾನು. ತಾತ ಸುಬ್ಬನ್ನ ಕೇಳಿದ: 'ಭಾಳ ರಾಗವಾಗಿ ಓದುತಿದೀಯಲ್ಲ – ಜಂಬವಾಗಿ. ಎಲ್ಲಿ ಅರ್ಥ ಹೇಳು ನೋಡೋಣ.'

'ಒಬ್ಬ ಕವಿ ಸೂರ್ಯನಿಗೆ ಹೇಳುತ್ತಾನೆ, ತಾತ – ನಿಮ್ಮ ಮಕ್ಕಳಲ್ಲಿ ವಯಸ್ಸಿನಲ್ಲಿ ಭೂದೇವಿ ಚಿಕ್ಕವಳು. ಆದರೂ ನಿಜವಾಗಿ ಆಕೆಯೇ ದೊಡ್ಡವಳು. ಯಾಕೆ ಅಂದೀರಿ! ಜೀವರಾಶಿಗಳನ್ನೆಲ್ಲ ನಮ್ಮ ಭೂಮಾತೆಯೊಬ್ಬಳೇ ಹೊರುತ್ತಿದಾಳೆ, ಅನ್ನುತ್ತಾನೆ.'

ತಿಮ್ಮಯ್ಯ ಮೆಚ್ಚಿ ತಲೆ ತೂಗಿದ. 'ನೋಡಿದಿರಾ ದೇವರು, ಈ ಮಗೂನ್ನ. ಹ್ಯಾಗೆ ಚಿಗುರುತ್ತಾ ಇದಾನೆ. ಎಷ್ಟಾದರೂ ಅವರ ತಾತನ ಮೊಮ್ಮಗ. ಇಂಗು ಕಟ್ಟಿದ ಬಟ್ಟೆಯ ವಾಸನೆ ಹೋದೀತೇ ಮತ್ತೆ ? — ಇರಲಿ, ಈ ಭೂಗೋಳದಲ್ಲಿ ಜೀವಿಗಳು ಎಷ್ಟು ಇವೆಯೋ ಗೊತ್ತೆ ?'

ತಾತನಿಗೆ ಒಂದು ಕಿತ್ತಿಲೆಹಣ್ಣು ಕೊಟ್ಟು, ಪ್ರಾರಂಭಿಸಿದೆ: 'ಮೊದಲು ಮನುಷ್ಯರ ಲೆಕ್ಕ ನೋಡೋಣ. ಪ್ರಪಂಚದ ಜನಸಂಖ್ಯೆ ೨೦೦ ಕೋಟಿ. ಅದರಲ್ಲಿ ೪೦ ಕೋಟಿ ನಮ್ಮ ದೇಶದಲ್ಲಿ. ಪ್ರಪಂಚದ ಪ್ರತಿ ಐದು ಜನರಲ್ಲೂ ಒಬ್ಬ ಭಾರತೀಯ.'

'ಗಿಡ ಗೆಂಟೆ, ಜಂತುಗಳು–ಅವುಗಳ ಲೆಕ್ಕ ?'

'ಅದನ್ನು ಲೆಕ್ಕವಿಡಲು ಸಾಧ್ಯವೆ, ತಾತ! ಗಾಳಿಯಲ್ಲಿ ಕೆಲವು, ನೀರಿ

ನಲ್ಲಿ ಕೆಲವು, ನೆಲದ ಮೇಲೆ ಕೆಲವು ! ಇವನ್ನೆಲ್ಲ ಎಣಿಸಲು ಸಾಧ್ಯವೇ ? '— ಎಂದ ಸುಬ್ಬ.

'ಹಾಗಲ್ಲ ಸುಬ್ಬ. ಈ ಪ್ರಯತ್ನವೂ ನಡೆಯದೆ ಇಲ್ಲ. ಇದುವರೆಗೆ ಲೆಕ್ಕಕ್ಕೆ ಸಿಕ್ಕಿದ್ದರಲ್ಲಿ– ಬೇರೆಬೇರೆ ಬಗೆಯ ಜಂತುಗಳು ೫ ಲಕ್ಷದ ಚಿಲ್ಲರೆ ಇವೆ. ಇವಲ್ಲದೆ ವರ್ಷಕ್ಕೆ ಒಂದು ನೂರು ಹೊಸ ಜಂತುಗಳನ್ನು ಕಂಡುಕೊಳ್ಳು ತ್ತಿದ್ದಾರೆ. ಹೂ ಗಿಡಗಳು ಬಗೆ ಬಗೆಯವು ೨ಲಕ್ಷ ೫೦ ಸಾವಿರ ಎಂದು ಲೆಕ್ಕ ಮಾಡಿದಾರೆ.'

' ನೋಡಿದೆಯಾಪ್ಪ ! ಈ ಶಾಸ್ತ್ರಿಗಳೇನು ಸಾಮಾನ್ಯದೋರೆ ! ಏನೋ ಇನ್ನೂ ಅನುಕೂಲವಾಗಿಲ್ಲ. ಇಲ್ಲದಿದ್ದರೆ ಇಷ್ಟುಹೊತ್ತಿಗೆ ನಕ್ಷತ್ರಗಳನ್ನೆಲ್ಲ ಎಣಿಸದೆ ಇದ್ದಾರೆಯೆ ? ....ದೇವರು, ಭೂಮಿ ಗುಂಡಾಗಿದೆ ಎಂದಿರಿ. ಈ ಹಣ್ಣು ಇದ್ದ ಹಾಗೇನು ? '

'ಇಲ್ಲ, ಈ ಕಿತ್ತಿಲೆ ಹಣ್ಣಿನ ಹಾಗೆಯೇ ಇಲ್ಲ. ಉತ್ತರ ದಕ್ಷಿಣ ಧ್ರುವ ಗಳ ಬಳಿ ಕೊಂಚ ಸಮಕಟ್ಟಾಗಿದೆ. ಇಕೊ, ಹೀಗೆ— '

ಚಾಕಿನಿಂದ ಹಣ್ಣಿನ ಮೇಲೂ ಕೆಳಗೂ ಸ್ವಲ್ಪ ಕುಯಿದು ಹಾಕಿದೆ.

' ಈ ಕಾಯಿಗೂ ಭೂಗೋಳಕ್ಕೂ ಇನ್ನೊಂದು ಭೇದವಿದೆ. ಈ ಕಾಯಿ ಇದ್ದಹಾಗೆ ಹೀಗೆ ಸರಿಯಾಗಿ ಗುಂಡಗೆ ಇಲ್ಲ. ಭೂಮಿಯ ಮಧ್ಯಭಾಗದಲ್ಲಿ ಚೆನ್ನಾಗಿ ಉಬ್ಬಿ ಇದೆ. ಚೆನ್ನಾಗಿ ಉಬ್ಬಿದ ಪೂರಿ ಇರುವುದಿಲ್ಲವೆ ? ಹಾಗೆ. ಭೂಗೋಳ ಸಲ್ಪ ತಗ್ಗು ದಿಣ್ಣೆಯಾಗಿ ಹಾಗೆ ಇದೆ.'

' ಸೂರ್ಯನ ಅಳತೆ, ಗೋಳಗಳ ಅಳತೆ ಮಾಡಿದಾರಲ್ಲ. ಇದರ ಅಳತೆಯೋ ? '

' ಓಹೋ ! ಭೂಗೋಳದ ಒಳಗಡೆ ಉತ್ತರ ಧ್ರುವದಿಂದ ದಕ್ಷಿಣ ಧ್ರುವದವರೆಗೂ ೭೯೦೦ ಮೈಲಿ ಉದ್ದ. ಭೂಗೋಳದ ಮಧ್ಯ ಭಾಗದಲ್ಲಿ ಅದೇ ರೀತಿ ಅಡ್ಡಳತೆ ಅದಕ್ಕಿಂತ ೨೭ ಮೈಲಿ ಹೆಚ್ಚು. ಇದರಿಂದಲೇ ಭೂಮಿಯ ನಡುಭಾಗ ಉಬ್ಬಿದೆಯೆಂದು ತಿಳಿದುಕೊಂಡರು. ಭೂಮಿಯ ಸುತ್ತಳತೆ ೨೫ ಸಾವಿರ ಮೈಲಿ. '

' ಭೂಮಿ ಗುಂಡಗೆ ಇದೆ ಎನ್ನಲಿಕ್ಕೆ ದೃಢವಾದ ಪ್ರಮಾಣ ಏನಾ ದರೂ ಇದೆಯೆ ? '

' ಬಹಳಾ ಇವೆ.

ಒಂದು–ಭೂಮಿಯ ನೆರಳು ಚಂದ್ರನಮೇಲೆ ಬಿದ್ದರೆ ಚಂದ್ರಗ್ರಹಣ ವಾಗುತ್ತಿದೆ. ಅಗ ಆ ನೆರಳು ಬಾಗಿ ಬಿಲ್ಲಿನ ಹಾಗಿರುವುದು ಕಾಣುತ್ತದೆ. ಇಕೊ ಈ ಕಾಯಿಯ ನೆರಳು ಆ ಗೋಡೆಯ ಮೇಲೆ ಹೇಗೆ ಬೀಳುತ್ತಾ ಇದೆ, ನೋಡು, ಹಾಗೇ....

ಎನಡನೆಯದು—ಭೂಪ್ರದಕ್ಷಿಣೆ. ನಮ್ಮೂರಿನಿಂದ ನೇರಾಗಿ ಪಡು ವಣ ದಿಕ್ಕಿಗೇ ಪಯಣ ಮಾಡಿದರೆ, ಕೆಲವು ವರ್ಷಗಳಾದಮೇಲೆ ನಮ್ಮೂರಿಗೇ ಬರುತ್ತೇವೆ. ಮೂಡುಗಡೆಯಿಂದ ಬರುತ್ತೇವೆ. ಹಡಗಿನಲ್ಲಿ ಲ್ಲಿವಿಮಾನದ ಹೀಗೆ ಬಹಳ ಮಂದಿ ಪ್ರಯಾಣ ಮಾಡಿದಾರೆ.

ಮೂರನೆಯದು—ಭೂಮಿ ಯವಾಗಲೂ ಉತ್ತರ ಧ್ರುವದಲ್ಲಿ ಧ್ರುವ ನಕ್ಷತ್ರವನ್ನೇ ನೋಡುತ್ತಿರುತ್ತದೆ ಎಂದು ಹೇಳಿದೆ. ಭೂಮಿ ಹಲಗೆಯಹಾಗೆ ಸಮವಾಗಿದ್ದಿದ್ದರೆ, ಭೂಮಿಯ ಮೇಲೆ ಎಲ್ಲಿ ನಿಂತು ನೋಡಿದರೂ, ಈ ಧ್ರುವನಕ್ಷತ್ರ ಯಾವಾಗಲೂ ಒಂದೇ ಕಡೆ ಒಂದೇ ಮಟ್ಟದಲ್ಲಿ ಕಾಣ ಬೇಕು. ವಾಸ್ತವವಾಗಿ ಹಾಗಿಲ್ಲ. ಭೂಮಿಯ ಮಧ್ಯಭಾಗದಿಂದ ಉತ್ತ ರಕ್ಕೆ ನಡೆಯುತ್ತಿದೇವೆ ಅಂದುಕೋ. ಹೋದಹಾಗೆಲ್ಲ ಧ್ರುವನಕ್ಷತ್ರ ಆಕಾಶದಲ್ಲಿ ಇನ್ನೂ ಮೇಲೆಮೇಲೆ ಕಾಣಿಸುತ್ತದೆ. ಉತ್ತರ ಧ್ರುವದ ಬಳಿಗೆ ಹೋದರೆ ಸರಿಯಾಗಿ ನಮ್ಮ ನಡುನೆತ್ತಿಯ ಮೇಲೆ ಕಾಣಿಸುತ್ತದೆ. ಭೂಮಿಯ ಮಧ್ಯಭಾಗದಿಂದ ನೋಡಿದರೋ – ಭೂಮಿ ಆಕಾಶ ಸೇರಿದ ಪ್ರದೇಶದಲ್ಲಿ ಕಾಣಿಸುತ್ತದೆ. ಅಲ್ಲಿಂದ ದಕ್ಷಿಣಕ್ಕೆ ಸರಿದೆವೋ ಕಾಣದು. ಭೂಮಿ ಗುಂಡಾಗಿಲ್ಲದಿದ್ದರೆ ಧ್ರುವನಕ್ಷತ್ರ ಹೀಗೆ ಕಾಣಿಸುತ್ತಿರಲಿಲ್ಲ !

ಇಷ್ಟೆಲ್ಲ ಪ್ರಮಾಣಗಳನ್ನು ನೋಡಿಯೆ ಭೂಮಿ ಗುಂಡಗೆ ದೆ ಅಂದರು.'

ಸ್ವಲ್ಪ ಆಲೋಚಿಸಿ ಕೇಳಿದ:

' ವಿಮಾನಗಳಲ್ಲಿ ಹೀಗೆ ತಿರುಗುತ್ತಾ ಇದಾರಲ್ಲ. ಅವರು ಯಾರಾ ದರೂ ಭೂಮಿಯ ಬಾಗು, ಬಿಲ್ಲು ನೋಡಿದರೋ, ಸ್ವಾಮಿ ?'

ಆತನ ಹರಿತವಾದ ಬುದ್ಧಿಗೆ ಮೆಚ್ಚಿದೆ.

'ಒಂದು ಬೆಟ್ಟದ ಸಾಲನ್ನು ವಿಮಾನದಿಂದ ಫೋಟೋ ತೆಗೆದರು. ಅಲ್ಲಿ ಬಾಗು ನಿಚ್ಚಳವಾಗಿ ಕಂಡುಬಂತು.'

'ಏನೋ ಮತ್ತೆ! ನಮ್ಮ ಭಾಗವತದಲ್ಲಿ ಜಂಬೂದ್ವೀಪ ಕುಶದ್ವೀಪ ಅಂತಲೂ ಸಪ್ತ ಸಮುದ್ರಗಳೆಂತಲೂ ಸೂರ್ಯ ಏಳುಕುದುರೆ ತೇರು ಹತ್ತಿ ಈ ಭೂಮಿಯ ಸುತ್ತಲೂ ತಿರುಗುತ್ತಿದಾನೆ ಅಂತಲೂ ಹೇಳುತ್ತಿದ್ದರು! ....ಈಗ ಆ ಏಳು ಸಮುದ್ರಗಳೂ ಹದಿನೆಂಟು ದ್ವೀಪಗಳೂ ಇವೆಯೆ? ಅಲ್ಲಿ ಕೂಡ ನಿಮ್ಮ ಶಾಸ್ತ್ರ ಬೇರೆಯೇನು?'

'ತಾತ, ಈಗ ಭೂಗೋಳದಲ್ಲಿ ಅಷ್ಟು ದ್ವೀಪಗಳೂ ಇಲ್ಲ, ಅಷ್ಟು ಸಮುದ್ರಗಳೂ ಇಲ್ಲ. ಒಂದಾನೊಂದು ಕಾಲದಲ್ಲಿ ಭೂಮಿ ಹಾಗಿತ್ತು ಎಂದು ಹೇಳಲು ಪ್ರಮಾಣಗಳೂ ಇಲ್ಲ. ಒಂದು ಮಾತ್ರ ನಿಜ. ಒಂದು ಕಾಲಕ್ಕೆ ನಮ್ಮ ಭೂಗೋಳದಲ್ಲಿ ನೀರಿಗಿಂತ ನೆಲವೇ ಹೆಚ್ಚಾಗಿತ್ತು. ಆಮೇಲೆ ಬಹಳ ಭೂಭಾಗ ಕುಸಿದು ಹೋದಂತೆ ಗೊತ್ತಾಗಿದೆ. ಈಗಿನ ಭೂಗೋಳ ಹೀಗಿದೆ—'

ಸುಬ್ಬನ ಭೂಗೋಳ ಪಟಗಳ ಪುಸ್ತಕವನ್ನು ತರಿಸಿದೆ. ಗೋಳ ಪಟವನ್ನು ತೆಗೆದೆ. ನನಗಿಂತ ಮೊದಲೇ ಸುಬ್ಬ ಮೊದಲಿಟ್ಟ. ಅವನ ಹುರುಪನ್ನು ಮುರಿಯಬಾರದೆಂದು ಕಿವಿಗೊಟ್ಟು ಕೇಳುತ್ತ ಫಲಾಹಾರ ಮಾಡುತ್ತಿದ್ದೆ.

'ನೋಡು ತಾತ. ಇದು ನಮ್ಮ ಭೂಗೋಳ. ಇದರಲ್ಲಿ ಬೆಳ್ಳಗೆ ತುಂಡುತುಂಡಾಗಿ ಕಾಣುವುದು ಖಂಡಗಳು, ದ್ವೀಪಗಳು. ಉಳಿದದ್ದು ಸಮುದ್ರ. ಒಟ್ಟು ಐದು ಖಂಡಗಳಿವೆ. ಇದು ಏಷ್ಯಾ; ಎಲ್ಲಕ್ಕಿಂತ ದೊಡ್ಡದು. ಪಕ್ಕದ್ದು ಯೂರೋಪು. ಇಲ್ಲಿದೆಯಲ್ಲ, ಈ ದೊಡ್ಡದು—ಆಫ್ರಿಕಾ ಖಂಡ. ಖಂಡಗಳಲ್ಲೆಲ್ಲ ಚಿಕ್ಕದು ಆಸ್ಟ್ರೇಲಿಯ....'

ತಾತ ಅಡ್ಡಕಟ್ಟಿದ. ದೀಪದ ಹತ್ತಿರ ಸರಿದ.

'ನಾವು ಎಲ್ಲಿದ್ದ ಹಾಗೆ ಮತ್ತೆ?'

'ಇದೋ ಇಲ್ಲಿ. ಏಷ್ಯಾಖಂಡದ ದಕ್ಷಿಣದಲ್ಲಿ ಇದು ನಮ್ಮ ಭರತ ವರ್ಷ. ಇದರಲ್ಲಿ ದಕ್ಷಿಣದಲ್ಲಿ ಕರ್ಣಾಟಕ; ಇಲ್ಲಿ. ಇಲ್ಲಿ ನಾವು, ತುಂಗ ಭದ್ರೆಗೆ ಹತ್ತಿರವಾಗಿ.'

ಭಾರತದೇಶದ ಪಟ ಬೇರೊಂದನ್ನು ತೆರೆದ.

'ಈ ಗೆರೆ ತುಂಗಭದ್ರೆಯೋ? ಹಾಗಾದರೆ ಕಾವೇರಿಯೆಲ್ಲಿ?'

'ಇದೋ, ಇದು ಕಾವೇರಿ. ಇಲ್ಲಿ ನಮ್ಮ ದೇಶಕ್ಕೆ ಉತ್ತರದಲ್ಲಿ ಅಡ್ಡ ವಾಗಿಲ್ಲವೆ? ಈ ಬೆಟ್ಟದ ಸಾಲುಗಳು ಹಿಮಾಲಯ ಪರ್ವತಗಳು.'

'ಸರಿ, ನಮ್ಮ ದೊರೆ ಎಲ್ಲಿದಾನೆ?'

'ನಮಗೆ ದೊರೆಯೇನು ಬಂತು? ದೊರೆಯೂ ಇಲ್ಲ ಗಿರೆಯೂ ಇಲ್ಲ.'

ಆ ತಲೆಮಾರಿಗೂ ಈ ತಲೆಮಾರಿಗೂ, ಆ ಮನೋಧರ್ಮಗಳ ಭೇದಕ್ಕೂ ನಡುವಿನ ತಲೆಮಾರಿನವನು ನಾನು. ತಾತನ ಕೋರಿಕೆ ತೀರಿಸ ಬೇಕೆಂದು ಅನಿಸಿತು.

'ತಾತ, ಇದು ಇಂಗ್ಲೆಂಡು ದೇಶ. ನಮ್ಮ ದೇಶಕ್ಕೆ ಆರು ಸಾವಿರ ಮೈಲಿ ದೂರದಲ್ಲಿದೆ. ಇಲ್ಲೇ ಬ್ರಿಟಿಷ್ ದೊರೆತನ ಇರೋದು.'

'ಗಾಂಧಿಯವರ ಊರು ಎಲ್ಲಿ?'

ಸುಬ್ಬ ತಡಕಾಡುತ್ತ ಬೊಂಬಾಯಿ ತೋರಿಸಬಂದ. ಸೇವಾಗ್ರಾಮ ವನ್ನು ತೋರಿಸಿದೆ.

ಸುಬ್ಬ ಮತ್ತೆ ಎಳೆ ಕೂಡಿಸಿದ.

'ಇನ್ನೂ ಎರಡು ಖಂಡ ಇದೆ ತಾತಾ. ಉತ್ತರ–ದಕ್ಷಿಣ ಅಮೆರಿಕಾ ಗಳು. ಇವನ್ನು 'ಹೊಸ ಪ್ರಪಂಚ' ಅನ್ನುತ್ತಾರೆ.'

'ಅದು ಯಾಕೆ?'– ಈ ಮುದಿ ರೈತನಿಗೆ ಸುಬ್ಬನ ವಯಸ್ಸು ಕಂಡು ಅವನು ಹೇಳಿದ್ದರಲ್ಲಿ ಗೌರವ ಕಡಮೆ. ನನ್ನ ಕಡೆ ತಿರುಗಿ ಮತ್ತೆ ಕೇಳಿದ.

'ಈ ಭೂಗೋಳ ಎರಡು ಭಾಗವಾಗಿದೆ ತಾತ. ಮೂಡುಗಡೆ ಇರುವ ಅರ್ಧಕ್ಕೆ ಮೂಡಲು ಅರ್ಧಗೋಳ ಅನ್ನುತ್ತಾರೆ. ಏಷ್ಯಾ, ಯೂರೋಪು, ಆಫ್ರಿಕಾ, ಆಸ್ಟ್ರೇಲಿಯಾ ಈ ಮೂಡಲು ಅರ್ಧಗೋಳದಲ್ಲಿವೆ. ಕೆಲವು ಸಾವಿರ ವರ್ಷದವರೆಗೂ ಈ ಹಳೆಯ ಪ್ರಪಂಚದ ಜನಕ್ಕೆ ತಮ್ಮ ಪಡು ಗಡೆಗೆ ಪಡುವಲು ಅರ್ಧಗೋಳದಲ್ಲಿ ಎರಡು ದೊಡ್ಡ ಖಂಡಗಳಿವೆ ಎಂಬುದೇ ಗೊತ್ತಿರಲಿಲ್ಲ. ಆದ್ದರಿಂದ ಈ ಅಮೆರಿಕಾ ಖಂಡಗಳನ್ನು ಕಂಡುಹಿಡಿದು, ಅವು ತಮಗೆ ಹೊಸವಾದ್ದರಿಂದ 'ಹೊಸ ಪ್ರಪಂಚ'ವೆಂದು ಹೆಸರಿಟ್ಟರು. ಈ ಆರು ಖಂಡಗಳು ಅಲ್ಲದೆ ದಕ್ಷಿಣ ಧ್ರುವದ ಸುತ್ತಲೂ ಸ್ವಲ್ಪ ಭೂಮಿ ಯಿದೆ.'

ತಿಮ್ಮಯ್ಯ ಒಂದು ಸಲ ನಕ್ಷೆಯನ್ನೆಲ್ಲಾ ನೋಡಿ– 'ಏನು ಬದುಕೋ ಇದು, ಬಾವಿ ಒಳಗಣ ಕಪ್ಪೆಯಹಾಗೆ. ನಮಗೆ ತಿಳಿಯದ ದೇಶಗಳು ಎಷ್ಟು ಇವೆ! ನನಗಾಗಲೇ ಎಪ್ಪತ್ತು. ನನ್ನ ಜನುಮದಲ್ಲಿ ತುಂಗಭದ್ರೆಯನ್ನು ದಾಟಿ ಗೊತ್ತಿಲ್ಲ........ ಅದಿರಲಿ, ಈ ಸಮುದ್ರಗಳಿಗೆ ಮಾತ್ರ ಹೆಸರಿಲ್ಲವೆ ಸ್ವಾಮಿ?'

'ನಮ್ಮ ದೇಶಕ್ಕೆ ದಕ್ಷಿಣದಲ್ಲಿರುವುದು ಹಿಂದೂ ಮಹಾಸಮುದ್ರ. ಈ ದೊಡ್ಡಸಮುದ್ರ, ಅಮೆರಿಕಾ ಏಷ್ಯಾಖಂಡಗಳ ನಡುವೆ ಇದೆಯಲ್ಲ– ಇದು ಪೆಸಿಫಿಕ್ ಮಹಾಸಮುದ್ರ. ಕೆರೆಯ ಹಾಗೆ ಇರುವುದು ಭೂಮಧ್ಯಸಮುದ್ರ. ಉತ್ತರ ಧ್ರುವದ ಬಳಿ, ದಕ್ಷಿಣ ಧ್ರುವದ ಬಳಿ ಮಂಜುಗಡ್ಡೆಯಿಂದ ತುಂಬಿದ 'ಆರ್ಕ್ಟಿಕ್', 'ಅಂಟಾರ್ಕ್ಟಿಕ್' ಸಮುದ್ರಗಳಿವೆ. ವರುಷದಲ್ಲಿ ಮೂರು ಪಾಲು ಕಾಲ ಅಲ್ಲಿ ನೀರು ಹೆಪ್ಪುಗಟ್ಟಿಕೊಂಡೇ ಇರುತ್ತದೆ.'

'ಅಲ್ಲಿ ಅಷ್ಟು ಚಳಿಯೇನೋ!'

'ನೆತ್ತರು ಹೆಪ್ಪುಕಟ್ಟಿಕೊಳ್ಳುತ್ತದೆ! – ಶೀತೋಷ್ಣಗಳನ್ನು ಅನುಸರಿಸಿ, ಶಾಸ್ತ್ರಜ್ಞರು ಭೂಮಿಯನ್ನು ಹೀಗೆ ಭಾಗಿಸಿದಾರೆ: ಭೂಮಿಯ ಮಧ್ಯದಿಂದ ಉತ್ತರ ದಕ್ಷಿಣ ಸುಮಾರು ೧೬೦೦ ಮೈಲಿಯವರೆಗೆ ಬಹಳ ಕಾವು. ಅದಕ್ಕೆ 'ಉಷ್ಣವಲಯ' ಎಂದು ಹೆಸರಿಟ್ಟದಾರೆ. ಈ ಭಾಗದಿಂದ ಉತ್ತರಕ್ಕೆ ಉತ್ತರ ಧ್ರುವದ ಕಡೆಗೆ, ದಕ್ಷಿಣಕ್ಕೆ ದಕ್ಷಿಣ ಧ್ರುವದ ಕಡೆಗೆ, ಸುಮಾರು ೩೨೦೦ ಮೈಲಿ ಅಷ್ಟು ಕಾವೂ ಇಲ್ಲ ಅಷ್ಟು ತಂಪೂ ಇಲ್ಲ, ಸಮವಾಗಿದೆ. ಹೀಗೆ ಉತ್ತರಾರ್ಧಗೋಳದಲ್ಲಿ ಒಂದು, ದಕ್ಷಿಣಾರ್ಧಗೋಳದಲ್ಲಿ ಒಂದು, 'ಸಮಶೀತೋಷ್ಣ ವಲಯ'ಗಳಿವೆ. ಈ ವಲಯಗಳ ಉತ್ತರ ದಕ್ಷಿಣ ಎಲ್ಲೆಗಳಿಂದ ಉತ್ತರ ಧ್ರುವ ದಕ್ಷಿಣ ಧ್ರುವಗಳವರೆಗೂ ಬಹಳ ತಂಪು. ಇವು 'ಶೀತ ವಲಯ'ಗಳು.'

ನಕ್ಷೆಯಲ್ಲಿ ಅವನ್ನು ತೋರಿಸಿದೆ.

'ನಮ್ಮ ದೇಶದಲ್ಲಿ ಅರ್ಧ ಉಷ್ಣವಲಯದಲ್ಲೂ ಅರ್ಧ ಸಮಶೀತೋಷ್ಣ ವಲಯದಲ್ಲೂ ಇದೆ, ಅಲ್ಲವೆ ಮೇಷ್ಟ್ರೆ?'

'ಹೌದು. ದಕ್ಷಿಣಾಪಥ ಉಷ್ಣವಲಯದಲ್ಲಿದೆ. ಉತ್ತರ ಹಿಂದು ಸ್ಥಾನ ಸಮಶೀತೋಷ್ಣ ವಲಯದೊಳಗಿನದು. ಇನ್ನೂ ವಿಶೇಷವೆಂದರೆ

ಹಿಮಾಲಯ ಪರ್ವತಗಳ ಮೇಲೆ ಹೆಚ್ಚುಕಡಮೆ ಶೀತವಲಯದ ಹಾಗೇ ಇದೆ.'

'ಅಂದರೆ ಎಲ್ಲಾ ನಮೂನೆಗಳೂ ನಮ್ಮ ದೇಶದಲ್ಲಿವೆ ಅಂತ.'

'ಹೌದು, ಅದೇ ತೊಂದರೆ. ಈ ದೇಶದಲ್ಲಿ ಬಗೆಬಗೆಯ ಬೆಳೆಗಳೆಲ್ಲ ಬೆಳೆವ ಅವಕಾಶಗಳಿವೆ. ಆದ್ದರಿಂದಲೇ ಬಹುಕಾಲದಿಂದ ಇತರ ದೇಶಗಳವರು ಈ ದೇಶವನ್ನು ತಮ್ಮ ಸ್ವಾಧೀನಮಾಡಿಕೊಳ್ಳಲು ಪ್ರಯತ್ನಿಸಿದರು. ಪರಜಾತಿಗಳ ದಂಡಯಾತ್ರೆಗೆ ಇಷ್ಟು ಗುರಿಯಾದ ದೇಶ ಇನ್ನೊಂದಿಲ್ಲ.'

'ಬೆಳೆಗಳು ಈ ವಲಯಗಳಲ್ಲಿ ಬೇರೆ ಬೇರೆಯೆ?'

'ಅಲ್ಲವೆ ಮತ್ತೆ? ಒಂದೊಂದು ಜಾತಿಯ ಗಿಡಕ್ಕೆ ಒಂದೊಂದು ಬಗೆಯ ಕಾವು – ತಂಪು ಬೇಕು. ನೆಲ್ಲು, ಜೋಳ, ಹತ್ತಿ, ಕಾಫಿ, ಚಾ, ರಬ್ಬರು, ತೇಗ, ನೆಲಗಡಲೆ, ಹೊಗೆಸೊಪ್ಪು ಇಂಥದೆಲ್ಲ ಉಷ್ಣವಲಯದವು. ಸಮಶೀತೋಷ್ಣವಲಯದಲ್ಲಿ ಗೋಧಿ ಬಾರ್ಲಿ ಮುಂತಾದವು ಚೆನ್ನಾಗಿ ಬೆಳೆಯುತ್ತವೆ. ಶೀತವಲಯದಲ್ಲಿ ಗಿಡಗಳು ಬೆಳೆಯುವುದೇ ಸಾಧ್ಯವಿಲ್ಲ. ಯಾವುದೋ ಚಿಕ್ಕ ಪೊದೆಗಳಂಥವು ಕೆಲವು ವಿನಾ ಮತ್ತೇನೂ ಬೆಳೆಯವು. ಗಿಡಗಳಾಗಲಿ ಜಂತುಗಳಾಗಲಿ ಉಷ್ಣವಲಯವೇ ಎತ್ತಿದ ಕೈ.'

'ಜಂತುಗಳಲ್ಲೂ ಈ ವಲಯವಾರು ಭೇದ ಇದೆಯೆ?'

ಸುಬ್ಬ ತನ್ನ ಪಾಂಡಿತ್ಯ ಪ್ರದರ್ಶನಕ್ಕೆ ಮೊದಲು ಮಾಡಿದ.

'ಅವು ಮಾತ್ರ ಪ್ರಾಣಿಗಳಲ್ಲವೆ? ಒಂದೊಂದು ಜಂತುವಿಗೆ ಒಂದೊಂದು ಪ್ರಮಾಣದ ಕಾವು ಬೇಕು. ಉಷ್ಣವಲಯದಲ್ಲಿ ಸಿಂಹ ಹುಲಿ ಚಿಗತೆ ಆನೆ ಮೊಸಳೆ ಇವೆಲ್ಲ ಇವೆ. ಬಣ್ಣಬಣ್ಣದ ಹಕ್ಕಿಗಳಿವೆ. ಗಿಣಿ ನವಿಲು ಇಲ್ಲಿಯವೇ. ಕಡಲಿನಲ್ಲಿ ಮುತ್ತಿನಚಿಪ್ಪು, ಹವಳದ ಗೂಡು ಎಲ್ಲಾ ಉಷ್ಣವಲಯದ್ದೇ.'

'ಹಣ್ಣಿನ ಜಾತಿ ಎಲ್ಲಿ ಹೆಚ್ಚಾಗಿವೆ ಸುಬ್ಬಯ್ಯ?'

ಕೈಯಲ್ಲಿದ್ದ ಕಿತ್ತಲೆಹಣ್ಣಿನ ಪ್ರಭಾವವಿರಬೇಕು – ಆ ಪ್ರಶ್ನೆಗೆ ಕಾರಣ.

'ಮಾವು ಹಲಸು ಕಿತ್ತಲೆ ಖರ್ಜೂರ ಉಷ್ಣವಲಯದಲ್ಲಿವೆ ತಾತ. ಸಮಶೀತೋಷ್ಣವಲಯದಲ್ಲಿ ಸೀಮೆಬೋರೆ, ದ್ರಾಕ್ಷೆ ಇಂಥವು ಇವೆ. ಹೆಚ್ಚು ಣ್ಣು ಉಷ್ಣವಲಯದಲ್ಲೇ.'ಹ

'ಒಂಟೆಗಳು ಈ ವಲಯದವೇನೆ?'

'ಒಂಟೆ, ದನ, ಎಮ್ಮೆ, ಬಗೆಬಗೆಯ ಜಿಂಕೆ, ನಾಯಿ, ನರಿ, ಮೊಲ ಇವೇ – ಬೇಕಾದಷ್ಟು!'

'ಆ ಸಮಶೀತೋಷ್ಣವಲಯದಲ್ಲಿ ಏನೇನಿವೆ ಮತ್ತೆ?' ಕಿತ್ತಲೆಹಣ್ಣು ಚಪ್ಪರಿಸುತ್ತಾ ಕೇಳಿದ.

'ಇಷ್ಟು ಬಗೆಯ ಜಂತುಗಳಿಲ್ಲ. ಅವರ ಕುದುರೆ, ನಾಯಿ, ದನ ಬೇರೆ ತರ. ನಮ್ಮ ವಲಯದ ಉಷ್ಣಕ್ಕೆ ಅವು ತಡೆಯಲಾರವು. ಹಕ್ಕಿಗಳು ಕೂಡ ಇಷ್ಟು ಬಗೆಯಿಲ್ಲ.'

'ಆ ಚಳಿದೇಶಗಳಲ್ಲೋ?'

'ಉತ್ತರ ಶೀತವಲಯದಲ್ಲಿ ಕರಡಿ, ತೋಳ, ನರಿ, ಬಿಳಿಯ ಗಿಡ್ಡ ನಾಯಿ ಇವೆ. ಒಂದು ವಿಚಿತ್ರವಾದ ಸಾರಂಗ ಇದೆ – ಹಿಮಸಾರಂಗ. ಅದು ಎಲ್ಲ ಕೆಲಸಕ್ಕೂ ಬರುತ್ತದೆ. ಅವರ ಪಾಲಿನ ಕಾಮಧೇನು. ಕಡಲಿನಲ್ಲಿ ತಿಮಿಂಗಿಲಗಳು, ಇನ್ನೂ ದೊಡ್ಡದೊಡ್ಡ ವಿಚಿತ್ರ ಜಂತುಗಳೂ ಇವೆ.... ದಕ್ಷಿಣ ಧ್ರುವದ ಬಳಿ ಒಂದು ವಿಲಕ್ಷಣ ಪಕ್ಷಿ ಇದೆ. ಅದು ಹಾರಲಾರದು, ಈಸುತ್ತದೆ. ಮನುಷ್ಯನ ಹಾಗೆ ನಿಂತು ನಡೆಯುತ್ತದೆ.'

ಸ್ವಲ್ಪ ಹೊತ್ತು ನಿಶ್ಶಬ್ದ. ಕಿತ್ತಲೆಹಣ್ಣು ಸುಲಿಯುತ್ತ ಯೋಚಿಸುತ್ತಿದಾನೆ. ಹಠಾತ್ತಾಗಿ ನನ್ನ ಕಡೆ ತಿರುಗಿ ಪ್ರಶ್ನೆಹಾಕಿದ.

'ಸ್ವಾಮಿ, ಗಿಡ ಜಂತು ಹಕ್ಕಿಗಳು ಕಾವು ಚಳಿಗಳಿಂದ ಈ ವಲಯಗಳಲ್ಲಿ ಹೀಗಿವೆಯಲ್ಲ. ಮನುಷ್ಯರೋ ಮತ್ತೆ? ಬಿಳಿಯವರ ದೇಶ ಬಹಳ ಚಳಿ ದೇಶವಂತೆ.'

ಭಲಾ ಶಿಷ್ಯ! ಅವನ ತಲೆಯಲ್ಲಿ ಅಷ್ಟು ತರ್ಕವಿದೆ.

'ಶೀತೋಷ್ಣಗಳಿಂದ ಮನುಷ್ಯರಲ್ಲೂ ಭೇದವಿದೆ, ತಾತ. ಉಷ್ಣವಲಯದವರ ಮೈಬಣ್ಣ ಮಾಗಿದ ಗೋಧಿಬಣ್ಣ, ಕಪ್ಪು ಗೇರುಬೀಜದ ಬಣ್ಣ. ಸಮಶೀತೋಷ್ಣವಲಯದಲ್ಲಿ ಜನ ಬಿಳಿಯವರು, ಇಲ್ಲವೆ ಹಳದಿ ಬಣ್ಣದವರು.'

'ಬಿಳಿಯವರ ದೇಶ ಯಾವುದು ಇದರಲ್ಲಿ?' ಆ ನಕ್ಷೆಯ ಕಡೆ ತೋರಿದ.

'ಇದೋ ಯೂರೋಪು ಖಂಡ.'

'ಎಲ್ಲಾ ತಲೆಕೆಳಗಾಗಿದೆ....ಹೋಗಲಿ, ಪಾತಾಳವಾದರೂ ಇದೆಯೋ, ಸಪ್ತಸಮುದ್ರಗಳು ಇಲ್ಲದಿದ್ದರೆ ಇಲ್ಲ?'

ನಗು ಬಂತು. ಇಂಥವರು ಇನ್ನೂ ಎಷ್ಟು ಕೋಟಿ ಜನ ಇದಾರೋ ಈ ದೇಶದಲ್ಲಿ! ಕೈಯಲ್ಲಿದ್ದ ಬೋರೆಯಹಣ್ಣಿನಿಂದ ಭೂಗರ್ಭವನ್ನು ಬೋಧಿಸಲು ತೊಡಗಿದೆ.

'ತಾತಾ, ಭೂಮಿಯ ಒಳಗಡೆ ಪ್ರಚಂಡವಾದ ಕಾವು ಇದೆ. ಭೂಮಿಯ ಮೇಲೆ, ಇಗೊ ಈ ಬೋರೆಯ ಹಣ್ಣಿನ ಸಿಪ್ಪೆಯ ಹಾಗೆ ಒಂದು ಹೆಂಚಿನ ಹೊದಿಕೆಯಿದೆ. ಇದರ ಮೇಲೇ ಬೆಟ್ಟ ನದಿ, ಈ ಪ್ರಾಣಿಕೋಟಿ— ಎಲ್ಲಾ! ಈ ಗಟ್ಟಿಹೆಂಚಿನ ಪದರ ೪೦-೫೦ ಮೈಲಿ ಆಳದವರೆಗೂ ಇದೆ. ಆಮೇಲೆ ಈ ಹಣ್ಣಿನ ತಿರುಳಿನ ಹಾಗೆ ಲೋಹಗಳು ಇವೆ. ದ್ರವದಶೆಯೂ ಅಲ್ಲದೆ ಘನದಶೆಯೂ ಅಲ್ಲದೆ ಮಧ್ಯಸ್ಥವಾಗಿ ಇದೆ. ಈ ಭಾಗ ೧೦೦ ಮೈಲಿ ದಪ್ಪ ಇದೆ. ಅಲ್ಲಿಂದ ಮುಂದೆ ಭೂಗೋಳದ ಮಧ್ಯಭಾಗದಲ್ಲಿ ಕಬ್ಬಿಣ ಹೆಚ್ಚಾಗಿ ಇದೆ. ಭೂಮಿಯ ಮಧ್ಯದಿಂದ ಸುತ್ತಲೂ ೨೦೦೦ ಮೈಲಿಯವರೆಗೂ ಹೀಗೆ ಇದೆ. ಈ ಭಾಗ ಘನದಶೆಯಲ್ಲಿದೆಯಂತೆ. ಬಹುಶಃ ಈ ಹಣ್ಣಿನ ಬೀಜದ ಹಾಗೆ.

'ನೋಡಿದವರ ಹಾಗೇ ಹೇಳ್ತೀರೆ? ಭೂಮಿಯ ಒಳಗಡೆ ಅಷ್ಟು ಉಷ್ಣವಾದರೆ ಇದನ್ನೆಲ್ಲ ಹೇಗೆ ತಿಳಿದುಕೊಂಡರು?'

'ಅದು ಬಹಳ ದೊಡ್ಡ ವಿಷಯ. ಆದರೂ ಸೂಕ್ಷ್ಮವಾಗಿ ಹೇಳುತ್ತೇನೆ. ಭೂಕಂಪದ ಸಂಗತಿ ಕೇಳಿದೀಯಾ?'

'ಹೂಂ, ಐದಾರು ವರ್ಷದ ಕೆಳಗೆ ಕಾಂಗ್ರೆಸ್ಸಿನವರು ಅಲ್ಲೆಲ್ಲೋ ಭೂಕಂಪ ಬಂತು ಎಂತ ಮನೆ ಮನೆಗೂ ಚಂದಾ ಎತ್ತಲಿಲ್ಲವೇ?'

'ಹೌದು, ಬಿಹಾರ್ ರಾಷ್ಟ್ರದಲ್ಲಿ ಭೂಕಂಪ ಬಂದು ಬಹಳ ನಷ್ಟವಾಯಿತು.... ಭೂಕಂಪವೆಂದರೆ ಭೂಗೋಳದಲ್ಲಿ ಎಲ್ಲೋ ಒಂದು ಕಡೆ ಬಹಳವಾಗಿ ಅದುರು ಪ್ರಾರಂಭವಾಗುತ್ತದೆ. ಅಲ್ಲಿಂದ ಆ ಅದುರು ಅಲೆಯ ಹಾಗೆ ಸುತ್ತಲೂ ಹರಡುತ್ತದೆ. ಕೆರೆಯಲ್ಲಿ ಕಲ್ಲು ಹಾಕಿದರೆ ನೀರಿನ ಅಲೆ ಸುತ್ತಲೂ ಹರಡುವ ಹಾಗೆ. ಈ ಭೂಕಂಪದ ಅಲೆಗಳ ಬಲವನ್ನು ಅಳೆಯಲು ಶಾಸ್ತ್ರ

ಜ್ಞರು ಒಂದು ಸಾಧನವನ್ನು ನಿರ್ಮಿಸಿದಾರೆ. ಬರೀ ಅಲೆಗಳ ಬಲವನ್ನಷ್ಟೆ ಅಳೆಯುದು ಈ ಯಂತ್ರ. ಭೂಗರ್ಭದಿಂದ ಈ ಅಲೆ ಮೇಲಕ್ಕೆ ಹಬ್ಬುವಾಗ ಭೂಮಿಯೊಳಗೆ ಸ್ಥಿತಿ ಹೇಗಿದೆಯೋ ಅದನ್ನೂ ತಿಳಿಸುತ್ತದೆ. ಅನೇಕ ಭೂಕಂಪಗಳಲ್ಲಿ ಇಂಥ ಲೆಕ್ಕಗಳನ್ನು ತೆಗೆದುಕೊಂಡಿದಾರೆ. ಆ ಲೆಕ್ಕಗಳ ಮೂಲಕ ಭೂಗೋಳದ ಪರಿಸ್ಥಿತಿಯನ್ನು ನಿರ್ಣಯಿಸಿದಾರೆ. ನಾನು ಮೊದಲು ಹೇಳಿದಹಾಗೆ ಇದೆ ಎಂದು ನಿಶ್ಚಯಿಸಿದಾರೆ. ಇಕೋ ಈ ಚಿತ್ರದ ಹಾಗೆ.'

ಚಿತ್ರವೊಂದನ್ನು ಗೀಚಿದೆ.



ಭೂಮಿಯ ಒಳಗೆ

'ಮೇಷ್ಟ್ರೆ, ನಮ್ಮ ಸುತ್ತಲೂ ಗಾಳಿಯ ಪರೆ ಎಷ್ಟರವರೆಗೂ ಇದೆ?'

'ನೂರು ಮೈಲಿಯ ತನಕ ಇದೆ ಎನ್ನಬಹುದು. ಆಮೇಲೆ ಬಹಳ ತೆಳುವು, ವಿರಳ.'

'ಸ್ವಾಮಿ. ಈ ಭೂಗೋಳ ಸೂರ್ಯನ ಚೂರು ಎಂದಿರಿ. ಮೊದಲು ವಾಯು ಎಂದಿರಿ. ಆಮೇಲೆ ಆರಿ ತಣ್ಣಗಾಯಿತು ಎಂದಿರಿ. ಈಗ ಭೂಗೋಳದ ಮಧ್ಯೆ ಲೋಹಗಳು ಗಡ್ಡೆ ಕಟ್ಟಿಕೊಂಡಿವೆ ಎನ್ನುತ್ತೀರಿ. ಅಂದರೆ ಭೂಗೋಳದ ಮಧ್ಯೆ ತಣ್ಣಗಾಗಿದೆ ಎಂದಲ್ಲವೆ?'

'ಅಲ್ಲವೆ ಮತ್ತೆ? ಆದರೆ ಈ ತಣ್ಣಗಾಗಲಿಕ್ಕೆ ಪ್ರಾರಂಭವಾದ್ದು ಮೇಲ್ಭಾಗದಲ್ಲೇ. ಸೂರ್ಯನಿಂದ ಸಿಡಿದುಬಿದ್ದ. ಲೋಹದ ಸರದಲ್ಲಿ ನಮ್ಮ ಈ ಭೂಗೋಳವೂ ಒಂದು ಲೋಹದ ತುಂಡು. ಗಿರ್ರೆಂದು ತಿರುಗುತ್ತ, ಈಗಿಗಿಂತ ಹೆಚ್ಚು ವೇಗದಿಂದ ತಿರುಗುತ್ತ ಖಗೋಳ ವೀಧಿಯಲ್ಲಿ ಬಿತ್ತು. ಕ್ರಮವಾಗಿ ಆರಲು ಮೊದಲಿಟ್ಟಿತು. ಇನ್ನೂ ತಿರುಗುತ್ತಲೇ, ಮೊದಲು ವಾಯುದಶೆಯಲ್ಲಿದ್ದ ಲೋಹಗಳು ದ್ರವರೂಪವಾಗಿ ಬದಲಾದವು. ಆ ಲೋಹಗಳಲ್ಲಿ ಕೆಲವು ಬಹಳ ಭಾರ, ಕೆಲವು ಬಹಳ ಹಗುರ, ಇನ್ನು ಕೆಲವು

ಮಧ್ಯಸ್ಥ. ಈ ಲೋಹಗಳು ಕಾವಾರಿ ತಣ್ಣಗಾದ್ದರಿಂದ ಒಂದು ವಿಚಿತ್ರ ನಡೆಯಿತು. ಹಗುರವಾದ ಅಲ್ಯೂಮಿನಿಯಂನಂಥವು ಗಡ್ಡೆಕಟ್ಟಿ ಮೇಲಕ್ಕೆ ತೇಲಿದವು. ಕಬ್ಬಿಣದಂಥಾವೇನೋ ತಳಕ್ಕೆ ಹೋದವು. ಮಧ್ಯಸ್ಥವಾದವು ನಡುವೆ ಉಳಿದವು.'

' ಅಂದರೆ ಭೂಗೋಳದ ಆದಿಯಲ್ಲೇ ಇಷ್ಟರ ತನಕ ಹೇಳಿದ ಮೂರೂ ಪದರಗಳು ಆಗಿವೆ ಎಂತಲೇ ? '

'ಹೌದು. ಆದರೆ ಭೂಮಿ ಗಿರಗಿರ ತಿರುಗುತ್ತಾ ಇದೆ. ಆದ್ದರಿಂದ ಭಾರವಾದ ಕಬ್ಬಿಣ ಮುಂತಾದ್ದು ನಡುವೆ ಸಿಕ್ಕಿಹೋಯಿತು. ಉಳಿದ ಎರಡು ಪದರಗಳೂ ಇದರ ಸುತ್ತಲೂ ಗುಂಡಗೆ ಕವಿದುಕೊಂಡವು. ಕ್ರಮೇಣ ಮೇಲಕ್ಕೆ ತೇಲಿದ ಹಗುರವಾದ ಲೋಹಗಳು ಗಡ್ಡೆಕಟ್ಟಿದವು. ಹೆಂಚಿನಹಾಗೆ ಆದವು. ಆದರೆ ಈ ಹೆಂಚಿನ ಪದರ ಎಲ್ಲಾ ಕಡೆಯಲ್ಲೂ ಒಂದೇ ದಪ್ಪಕ್ಕೆ ಇಲ್ಲ. ಈ ಮೇಲುಪದರ ಬಲಹೀನವಾಗಿರುವ ಕಡೆ ಈಗಲೂ ಭೂಮಿಯ ಒಳಗಿಂದ ಲೋಹರಸ ಚಿಮ್ಮಿ ಪುಟಿದು ಹೊದಿಕೆಯನ್ನು ಹರಿದು ಮೇಲೆ ಬರುತ್ತದೆ. ಬಹಳವಾಗಿ ಜನ ನಷ್ಟ, ಆಸ್ತಿ ನಷ್ಟ ಆಗುತ್ತದೆ. ಭೂಮಿಯ ಸುತ್ತಲೂ ನೀರಿನ ಆವಿ ತಗ್ಗಿನಲ್ಲಿ ನಿಂತು ಕಡಲು ಆಗಿದೆ.'

' ಸ್ವಾಮಿ, ಸೂರ್ಯಬಿಂಬದೊಳಗಿಂದ ೩೦೦ ಕೋಟಿ ವರ್ಷಗಳ ಕೆಳಗೆ ಅಲ್ಲವೆ, ಭೂಮಿ ರೂಪುಗೊಂಡದ್ದು ? '

' ಅಲ್ಲ. ಸೂರ್ಯನಿಂದ ವಾಯುಪದಾರ್ಥ ಸಿಡಿದು ಖಗೋಳದಲ್ಲಿ ಬಿದ್ದು ೩೦೦ ಕೋಟಿ ವರ್ಷವಾಯಿತು. ನಮ್ಮ ಭೂಗೋಳ ಆ ವಾಯು ಪದಾರ್ಥದಲ್ಲಿ ಒಂದು ತುಣುಕು ಅಲ್ಲವೆ ? ಅದಕ್ಕಿಂತ ಕೊಂಚ ಕಡಮೆಯಾಗಿರಬೇಕು. ಬಹಳ ಬಹಳ ಬಗೆಯಾಗಿ ಅಂದಾಜು ಮಾಡಿ, ನಮ್ಮ ಈ ಭೂಗೋಳ ೧೦೦ ಕೋಟಿಯೋ ೨೦೦ ಕೋಟಿಯೋ ವರ್ಷಗಳ ಹಿಂದೆ ರೂಪುಗೊಳ್ಳಲು ಮೊದಲಾಗಿರಬೇಕು ಎನ್ನುತ್ತಾರೆ ಶಾಸ್ತ್ರಜ್ಞರು.'

ಸ್ವಲ್ಪ ಹೊತ್ತು ಎಲ್ಲರೂ ನಿಶ್ಶಬ್ದವಾಗಿ ಕೂತೆವು. ಫಲಾಹಾರ ಮಾಡುತ್ತ ತಿಮ್ಮಯ್ಯ ಆ ನಕ್ಷೆಯ ಕಡೆಗೇ ನೋಡುತ್ತಿದಾನೆ—ಮುಂದೇನು ಎಂಬಂತೆ !

ತಾತ ವೇದಾಂತದ ಧೋರಣದಲ್ಲಿದಾನೆ.

'ಒಳಗೇನೋ ಭರಿಸಲಾರದಷ್ಟು ಬೆಂಕಿ, ಮೇಲಂತೂ ಈ ಸೂರ್ಯನ ಬಿಸಿ– ಇವೆರಡರ ನಡುವೆ ಒಂದು ಹೆಂಚು! ಈ ಹೆಂಚಿನ ಮೇಲೇನೇ ನಮ್ಮ ನಾಟಕವೆಲ್ಲಾ ! ಹುಟ್ಟು, ಬೆಳವಣಿಗೆ, ಸಂಸಾರದಲ್ಲಿ ಈಸು, ಕಟ್ಟಕಡೆಗೆ ನಾವು....ಇಷ್ಟೇ....ಎಲ್ಲಾ ವಿಚಿತ್ರವಾಗಿದೆ. ಮುಂದೆ ಕೆರೆ, ಹಿಂದೆ ಬಾವಿ ಇದ್ದ ಹಾಗೆ. ಇತ್ತ ಸೂರ್ಯನಿಗೆ ಸಿಟ್ಟುಬಂತೋ ನಮ್ಮ ತಲೆ ಹೋಯಿತು ; ಇತ್ತ ಭೂದೇವಿಗೇ ಪಿತ್ತ ಏರಿತೋ ನಮ್ಮ ಮನೆಹಾಳು. ಏನು ಬದುಕು ಇದು !'

ಸುಬ್ಬನಿಗೆ ಪರೀಕ್ಷೆ ಹತ್ತಿರ ಬಂದಿದೆ. ನೆನಪಾಗಿ, ಸ್ವಲ್ಪ ಎಚ್ಚರಿಕೆ ಕೊಟ್ಟೆ.

'ಸ್ವಲ್ಪ ಆ ಪುಸ್ತಕಗಳನ್ನು ತಿರುವಿಹಾಕಪ್ಪ. ಇನ್ನೇನು ಒಂದೇ ತಿಂಗಳು. ಬೇಸಗೆ ಬಿಡುವಿನಲ್ಲಿ ಬಾಲ ಬಿಚ್ಚೀಯಂತೆ ಮನಸ್ಸಿಗೆ ಬಂದ ಹಾಗೆ. ಏಳು ಏಳು.'

'ಸ್ವಾಮಿ ಬೇಸಗೆ ಬಿಡುವು ಎಂದರೆ ನೆನಪಾಯಿತು. ನಮಗೆ ಈ ಬೇಸಗೆ ಚಳಿ ಹೇಗೆ ಬರುತ್ತವೋ ಹೇಳಿ.'

'ಇನ್ನೊಂದು ಸಲ, ತಾತ. ಈಗ ನಾನು ಓದಿಕೋ ಬೇಕು' ಎನ್ನುತ್ತ ಮಹಡಿಯ ಮೇಲಕ್ಕೆ ಹೊರಟ ಸುಬ್ಬ.



೮

## ಒಬ್ಬಳೇ ಒಬ್ಬ ಮಗಳು—ಭೂದೇವಿ (೬)

ಸೂರ್ಯ ಮುಳುಗುತ್ತಿದ್ದ.

ದನಕ್ಕೆ ದಾಣಾ ಇಡುತ್ತಿದ್ದ ತಿಮ್ಮಯ್ಯ 'ಮತ್ತೆ ಹೊತ್ತು ಹುಟ್ಟುವ ತನಕ ಸೂರ್ಯನಾರಾಯಣ ಈ ಭೂಗೋಳದಲ್ಲಿ ಯಾರಿಗೂ ಕಾಣಿಸೋದಿಲ್ಲ ವಲ್ಲವೆ' ಎಂದ.

ಚೆಂಡಿನಿಂದ ಪುಟಚೆಂಡು ಆಡುತ್ತಿದ್ದ ಸುಬ್ಬ 'ಎಲ್ಲರಿಗೂ ಅಲ್ಲ, ತಾತ; ನಮಗೆ ಮಾತ್ರ. ಅತ್ತಕಡೆಯುವರಿಗೆ ಈಗಲೇ ಹೊತ್ತುಹುಟ್ಟುತ್ತಿದೆ' ಎಂದ.

'ದೇವರು ಈ ಅತ್ತಕಡೆ ಏನು ಬಂತು?'

ಸುಬ್ಬ ಪುಟಚೆಂಡು ಆಡುತ್ತಲೇ ಭಾಷಣ ಕೊಡುತ್ತಿದಾನೆ: 'ಹೇಳ ಲಿಲ್ಲವೆ ಮೊದಲೇ. ಭೂಗೋಳ ಎರಡುಭಾಗ ಎಂತಲೆಕ್ಕ ಹಿಡೀತೇವೆ ಅಂತ. ಭೂಗೋಳದ ಮೂಡಲಲ್ಲಿರುವ ನಮಗೆ ಹಗಲಾದರೆ ಪಡುವಲಲ್ಲಿರುವವರಿಗೆ ರಾತ್ರಿ. ಅವರಿಗೆ ಹೊತ್ತು ಹುಟ್ಟುತಾ ಇದ್ದರೆ ನಮಗೆ ಹೊತ್ತು ಮುಳುಗು ತ್ತದೆ.'

'ದೇವರು, ಈ ಹೀಚಿನ ಸಂಗಡ ಏನು? ಊಟ ಆದಮೇಲೆ ನೀವು ಹೇಳಿ. ಇಷ್ಟರಲ್ಲಿ ಎಮ್ಮೆಗಳಿಗೆ ಕಾಳು, ಹಾಲು ಹಿಂಡುವುದು ಎಲ್ಲವನ್ನೂ ಮುಗಿಸಿಕೊಂಡು ಬರುತ್ತೇನೆ.'

* * *

ಒಂದು ಗಂಟೆಯ ತರುವಾಯ ಬೀದಿಯ ಪಡಸಾಲೆಯಲ್ಲಿ ಪುರಾಣ ಕಾಲಕ್ಷೇಪ ಪ್ರಾರಂಭವಾಯಿತು. ನಾನೂ ತಿಮ್ಮಯ್ಯನೂ ಕೂಡುತ್ತಿದ್ದ ಹಾಗೇ ಸುಬ್ಬನೂ ಊಟಮಾಡಿ ಬಂದ. ಅವನ ದೊಗಲೆ ಷರಾಯಿ ಜೇಬಿ ನಲ್ಲಿದ್ದ ಚೆಂಡು, ಕೈಲಿದ್ದ ಟಾರ್ಚು ಎರಡನ್ನೂ ತೆಗೆದುಕೊಂಡೆ. ಆ ಟಾರ್ಚು

ಯಾವಾಗಲೋ ಕೊಂಡಿದ್ದ ಜಪಾನೀ ಸರಕು. ಚಿಕ್ಕದು. ಟಾರ್ಚಿನ ಬೆಳಕು ಬೀಳುವಷ್ಟು ದೂರದಲ್ಲಿ ಚೆಂಡನ್ನು ಹಿಡಿದುಕೊಂಡೆ.

'ನೋಡು ತಾತಾ. ಈ ಟಾರ್ಚು ಸೂರ್ಯ ಅಂದುಕೋ. ಈ ಚೆಂಡು ಭೂಗೋಳ ಅಂದುಕೋ. ಈಗ ಈ ಟಾರ್ಚಿನ ಬೆಳಕು ಚೆಂಡಿನ ಒಂದು ಪಕ್ಕದಮೇಲೆ ಮಾತ್ರವೇ ಬೀಳುತ್ತಾ ಇದೆ. ಆ ಪಕ್ಕದ ಮೇಲೆ ಬೀಳುತಾ ಇಲ್ಲ. ಈಗ ಈ ಚೆಂಡು ತನ್ನ ಸುತ್ತ ತಾನು ಒಂದು ಸಲ ತಿರುಗಿತು ಅನ್ನು. ಆಗ ಏನಾಗುತ್ತದೆ?'

ಚೆಂಡನ್ನು ಸ್ಥಳ ಬದಲಿಸದೆ ಹಾಗೇ ನಿಧಾನವಾಗಿ ಒಂದು ಕೈಯಿಂದ ಒಂದು ಸುತ್ತು ತಿರುಗಿಸಿದೆ.

'ಸರಿ ಬಿಡಿ ಗೊತ್ತಾಯ್ತು. ಇದುವರೆಗೆ ಬೆಳಕು ಬೀಳದ ಕಡೆ ಈಗ ಬೀಳುತ್ತಾ ಇದೆ.'

ತಾತ ಎಲೆಅಡಿಕೆ ಸಂಚಿ ತೆಗೆದ. ಸುಬ್ಬ ತನ್ನ ಪುಸ್ತಕಗಳನ್ನು ತಂದ. ಅವನ ನಕ್ಷೆಯ ಪುಸ್ತಕದಲ್ಲಿ ರಾತ್ರಿಹಗಲು ತೋರಿಸುವ ಚಿತ್ರ ತೆಗೆದೆ.







'ಇಕೊ, ಈ ಚಿತ್ರದಲ್ಲಿ ಭೂಗೋಳದ ಮೇಲೆ ಸೂರ್ಯ ಕಿರಣಗಳು ಬಲಗಡೆಯಿಂದ ಬೀಳುತ್ತಿವೆ. ಬೆಳಕು ಬಿದ್ದ ಭೂಗೋಳದಲ್ಲಿ ಅರ್ಧಭಾಗ – ಪೂರ್ವಾರ್ಧಗೋಳ – ಬೆಳ್ಳಗೆ ಇದೆ. ಇದರಲ್ಲಿ ಇದು ಆಫ್ರಿಕಾಖಂಡದ ಪಡುವಣ ಎಲ್ಲೆ. ಈ ಭಾಗದಲ್ಲಿ ಹಗಲು. ಕಪ್ಪಗೆ ಇರುವುದು ಪಶ್ಚಿಮಾರ್ಧ ಗೋಳ. ಅಲ್ಲಿ ರಾತ್ರಿ, ಅಮೆರಿಕಾ ಖಂಡಗಳಲ್ಲಿ. ಭೂಮಿ ಒಂದು ಸಲ ಗಿರ್ರೆಂದು ತನ್ನ ಸುತ್ತ, ತಿರುಗಿದರೆ ಅಮೆರಿಕಾ ಖಂಡಗಳು ಸೂರ್ಯನ ಎದುರಿಗೆ ಬರುತ್ತವೆ. ಆಫ್ರಿಕಾಖಂಡ, ಪೂರ್ವಾರ್ಧಗೋಳದ ಇತರ ಖಂಡಗಳು ಕತ್ತಲೊಳಕ್ಕೆ ಹೋಗುತ್ತವೆ. ಹೀಗೆ ಭೂಭ್ರಮಣದಿಂದ ಒಂದು ಅರ್ಧ ಭಾಗಕ್ಕೆ ಹಗಲಾದರೆ ಇನ್ನೊಂದು ಭಾಗಕ್ಕೆ ರಾತ್ರಿ. ಒಂದು ಕಡೆ ಹೊತ್ತು ಹುಟ್ಟಿದರೆ ಮತ್ತೊಂದು ಕಡೆ ಸಂಜೆ. ಹಗಲೂ ರಾತ್ರಿ ಆಗುವುದು ಹೀಗೆ.'

ತಾತ ಎಲೆ ಮೆಲ್ಲುತ್ತಿದ್ದಾನೆ.

'ಮೇಷ್ಟ್ರೆ, ಭೂಗೋಳ ತನ್ನ ಸುತ್ತ ತಾನು ಎಷ್ಟು ವೇಗದಿಂದ ತಿರುಗುತ್ತದೆ?'

'ಭೂಗೋಳದ ಮಧ್ಯಭಾಗದಲ್ಲಿ ಗಂಟೆಗೆ ಸಾವಿರ ಮೈಲು ವೇಗ. ಅದೂ ಜೋರಾಗಿ ನಿದ್ದೆಮಾಡುವ ಬುಗರಿಯ ಹಾಗೆ ತಿರುಗದು. ಅಚ್ಚಿನ ಬಳಿ ಸ್ವಲ್ಪ ಅತ್ತಾ ಇತ್ತಾ ತೂಗುತ್ತಿದೆ.'

'ಅಚ್ಚು ಎಂದಿರಿ, ಅಚ್ಚು ಎಂದರೆ?'

'ಅಚ್ಚು ಎಂತ ಒಂದು ಪದಾರ್ಥ ಇಲ್ಲ. ಭೂಗೋಳದ ಉತ್ತರ ಧ್ರುವದಿಂದ ದಕ್ಷಿಣ ಧ್ರುವದವರೆಗೆ ಒಂದು ಗೆರೆ ಇದ್ದಹಾಗೆ ಶಾಸ್ತ್ರಜ್ಞರು ಊಹಿಸುತ್ತಿದ್ದಾರೆ. ಈ ಗೆರೆಯನ್ನು ಅನುಸರಿಸಿ ಭೂಭ್ರಮಣವಾಗುತ್ತಿದೆ ಅನ್ನುತ್ತಾರೆ. ಆ ಗೆರೆಯೇ ಭೂಗೋಳದ **ಅಕ್ಷ, ಅಚ್ಚು.** ಬೇರೇನೂ ಇಲ್ಲ.'

'ಹೀಗೆ ತನ್ನ ಸುತ್ತೂ ತಿರುಗುತಾ ತಿರುಗ್ತಾನೇ ಸೂರ್ಯನ ಸುತ್ತೂ ಪ್ರದಕ್ಷಿಣೆ ಮಾಡುತ್ತಾ ಇದೆಯೋ?'

'ತಾತಾ, ಉತ್ತರ ಧ್ರುವದಿಂದ ಧ್ರುವನನ್ನು ನೋಡ್ತಾ....' ಸುಬ್ಬ ನೆನಪಿಸಿದ.

'ಓಹೋಹೋ, ಬಂದೆ ಜಾಣಮರಿ! ನನಗೂ ನೆಪ್ಪು ಇದೆ....ಆದರೆ ಈಕೆ ಕೂಡ ಅಣ್ಣತಮ್ಮಂದಿರ ಹಾಗೆ ನೌತಿಕಾಯ ರೀತಿಯೊಳಗೇ ತನ್ನ ತವರುಮನೆ ಪ್ರದಕ್ಷಿಣೆ ಮಾಡ್ತಾಳೇನು ಸ್ವಾಮಿ?'

ಸುಬ್ಬ ನಗುತ್ತಿದ್ದಾನೆ.

'ಹೌದು ತಾತ. ಸೂರ್ಯನ ಸುತ್ತ ಭೂಪಥದ ಉದ್ದ ೬೦ ಕೋಟಿ ಮೈಲಿ.'

'ಮೇಷ್ಟ್ರೆ, ಪಥದ ಮೇಲೆ ಎಷ್ಟು ವೇಗದಿಂದ ಹೋಗುತ್ತಿದೆ?'

'ಕ್ಷಣಕ್ಕೆ ೧೮|| ಮೈಲಿ.'

'ಸ್ವಾಮಿ, ಸೂರ್ಯನಾರಾಯಣಸ್ವಾಮಿ ನಮ್ಮ ಸುತ್ತು ತಿರುಗೋದಿಲ್ಲ ಅನ್ನುತೀರಿ. ಹಾಗಾದರೆ ಮೂಡಲಿಂದ ಮಟಮಟ ಮಧ್ಯಾಹ್ನದಲ್ಲಿ ಹಾಗೇ ನೆತ್ತಿಯ ಮೇಲಕ್ಕೆ ಬಂದು ಕಡೆಗೆ ಪಡುವಕ್ಕೆ ಇಳೀತಿದ್ದಾನಲ್ಲ?'

'ಹಾಗೆ ನಮಗೆ ಕಾಣಿಸುತ್ತದೆ. ರೈಲು ಸ್ಟೇಷನ್ನಿನಲ್ಲಿ ಎರಡು ರೈಲು

ಪಕ್ಕಪಕ್ಕದಲ್ಲಿ ನಿಂತಿವೆ. ಒಂದರಲ್ಲಿ ನೀ ಕೂತಿದೀಯೆ. ನೀನು ಕೂತಿದ್ದ ರೈಲು ಹೊರಟಿತು. ಕಿಟಕಿ ಒಳಗಿನಿಂದ ನೋಡುತ್ತಾ ಇದ್ದರೆ ನಿನಗೆ ಹೇಗೆ ಕಾಣಿಸುತ್ತದೆ ಅಂದರೆ – ಪಕ್ಕದ ರೈಲು ಹೊರಟು ನಿನ್ನನ್ನು ದಾಟಿ ಹಿಂದಕ್ಕೆ ಹೊರಡುತ್ತಿದ್ದಹಾಗೆ ಅನಿಸುತ್ತದೆ. ಇನ್ನೊಂದು ರೈಲಿನ ಗಾಡಿ ನೋಡಿ, ಅದು ಕದಲದೆ ಇರುವುದನ್ನು ಕಂಡಮೇಲೆ, ಹೋಗು ತಿರುವುದು ನೀನು ಇದ್ದ ರೈಲೇ, ಇನ್ನೊಂದಲ್ಲ ಎಂಬುದನ್ನು ತಿಳಿಯು ತ್ತೀಯೆ. ಹಾಗೇ ನಮ್ಮ ಭೂಗೋಳ ತನ್ನ ಸುತ್ತ ತಾನು ಪಡುವಲಿಂದ ಮೂಡಲಿಗೆ ತಿರುಗುತ್ತಿದೆ. ಭೂಗೋಳದ ಮೇಲೆ ಇರುವ ನಾವು ಸೂರ್ಯ ಮೂಡಲಿಂದ ಪಡುಗಡೆಗೆ ಹೋಗುತಾ ಇದಾನೆ ಅಂತ ಭ್ರಾಂತಿಗೊಳ್ಳು ತ್ತೇವೆ.'

'ಆದರೆ ಭೂಗೋಳ ತಿರುಗುತ್ತಾ ಇದೆ ಅಂತ ಖಂಡಿತವಾಗಿ ಹೇಳು ವುದು ಹೇಗೆ?'

ತೊಡಕಿನ ಸವಾಲು! ಶಾಸ್ತ್ರ ಯಾವುದನ್ನೂ ನಿರ್ಧರವಾಗಿ ಶಾಸನ ಮಾಡಿ ಹೇಳುತ್ತದೆ. ನಂಬುವವರಿಗೆ ತೊಂದರೆಯಿಲ್ಲ. ತರ್ಕಮಾಡುವ ಜನಕ್ಕೆ ಬಿಡಿಸಿ ಬಿಡಿಸಿ ಹೇಳಬೇಕು. ಕೇಳುವ ವಿದ್ಯಾರ್ಥಿಗೆ ಭೌತಶಾಸ್ತ್ರ ಜ್ಞಾನ ಚೆನ್ನಾಗಿರಬೇಕು. ಆಗ ಇದನ್ನು ತಿಳಿಸಿ ಹೇಳಬಹುದು. ಖಗೋಳ ಶಾಸ್ತ್ರ ಬೋಧನೆಯಲ್ಲಿರುವ ಕಷ್ಟ ಇದು!

'ತಾತ, ಈ ಭೂಗೋಳದ ಅಣ್ಣತಮ್ಮಂದಿರೆಲ್ಲ ಹೀಗೆ ತಮ್ಮ ಸುತ್ತ ತಾವು ತಿರುಗುತ್ತಲಿರುವುದು ನಮಗೆ ಗೊತ್ತು. ಆದ್ದರಿಂದ ಅವುಗಳ ಜೊತೆಗೇ ಸೂರ್ಯನಿಂದ ಹುಟ್ಟಿದ ಈ ಭೂಗ್ರಹವೂ ಕೂಡ ತಿರುಗಬೇಕಲ್ಲವೆ?

ಇದಲ್ಲದೆ ಶಾಸ್ತ್ರಜ್ಞರು ಒಂದು ಪರಿಶೋಧನೆಮಾಡಿ ಇದನ್ನು ನಿರ್ಧರಿಸಿ ದಾರೆ. ಅದನ್ನು ತಿಳಿದುಕೊಳ್ಳುವುದು ಬಹಳ ಕಷ್ಟ. ಆದರೆ ಆ ಪರಿ ಶೋಧನೆಯಿಂದ ಅತಿ ನಾಜೂಕಾದ ಒಂದು ಉಪಕರಣವನ್ನು ಸೃಷ್ಟಿಸಿ ದರು. ಇದು ಹಡಗುಗಳಲ್ಲಿ ಇರುತ್ತದೆ; **ಉತ್ತರಮುಖಿ** ಅನ್ನುತ್ತಾರೆ. ಅದನ್ನು ಒಂದು ಚಕ್ರದಲ್ಲಿ ಅಮರಿಸಿದಾರೆ. ಈ ಚಕ್ರ ಗಿರ್ರೆಂದು ನಿಮಿಷಕ್ಕೆ ಹಲವು ಸಾವಿರ ಸುತ್ತು ತಿರುಗುತ್ತದೆ! ಎಷ್ಟರತನಕ ತಿರುಗುತ್ತದೆ ಅಂದರೆ ಈ ಚಕ್ರದ ಅಚ್ಚು ಉತ್ತರ ದಕ್ಷಿಣಗಳನ್ನು ತೋರಿಸುವ ತನಕ. ಶಾಸ್ತ್ರಜ್ಞರು

ಭೂಮಿ ತನ್ನ ಸುತ್ತ ತಾನು ತಿರುಗದೆ ಇದ್ದರೆ ಈ ಯಂತ್ರ ಹೀಗೆ ತಿರುಗು ವುದು ಸಂಭವವಲ್ಲ ಎನ್ನುತ್ತಾರೆ. ಆದ್ದರಿಂದ ಭೂಗೋಳ ತನ್ನ ಸುತ್ತಲೂ ತಾನು ತಿರುಗುತ್ತಿದೆ ಎನ್ನುತ್ತಾರೆ.'

'ಈ ಯಂತ್ರಗಳೂ ಈ ಶಾಸ್ತ್ರಗಳೂ ಎಲ್ಲಾ ಯಕ್ಷಿಣೀ ಇದ್ದ ಹಾಗಿದೆ' ಎಂದ ತಿಮ್ಮಯ್ಯ.

ಸ್ವಲ್ಪ ಹೊತ್ತು ನಿಶ್ಶಬ್ದ. ಆಮೇಲೆ ಚಟ್ಟನೆ ಕೇಳಿದ. 'ದೇವರು, ಋತುಗಳ ಸಂಗತಿ ಕಳೆದ ಸಲವೆ ಹೇಳ್ತೀನಿ ಅಂದಿರಿ. ಆಗಲಿ ಮತ್ತೆ.'

ಮತ್ತೊಂದು ಅತಿ ಕ್ಲಿಷ್ಟವಾದ ವಿಷಯ. ಎಷ್ಟೋ ಊಹಾಶಕ್ತಿ, ಭಾವನಾಬಲ ಇದ್ದರೇ ಹೊರತು ಸುಲಭವಾಗಿ ಅರ್ಥವಾಗದ ವಿಷಯ. ಚೆಂಡು ಟಾರ್ಚು ತೆಗೆದುಕೊಂಡು ಮೊದಲಿಟ್ಟೆ.

'ನಡುವೆ ಬಾಯಿಹಾಕದೆ ನಿದಾನವಾಗಿ ಕೇಳು ತಾತ. ಭೂಗೋಳ ತನ್ನಸುತ್ತ ತಾನು ದಿನಕ್ಕೆ ಒಂದುಸಲ ತಿರುಗುತ್ತ, ೩೬೫ ದಿನಗಳಲ್ಲಿ ಸೂರ್ಯನ ಸುತ್ತ ಒಂದು ಪ್ರದಕ್ಷಿಣೆ ಮಾಡುತ್ತಿದೆ. ಹಗಲು–ರಾತ್ರಿಗಳಿಂದ ಭೂಗೋಳ ದಲ್ಲಿ ಪ್ರತಿ ಅರ್ಧ ಗೋಳವೂ ೩೬೫ ಸಲ ಸೂರ್ಯನಿಗೆ ಇದಿರಾಗಿ ಬರುತ್ತಿದೆ. ಸೂರ್ಯಕಿರಣಗಳು ಬಿದ್ದ ಅರ್ಧಭಾಗ ಬಿಸಿಯಾಗುತ್ತದೆ. ಆದರೆ ಸೂರ್ಯ ಕಾಂತಿ ಭೂಗೋಳದ ಮೇಲೆ ಒಂದೇ ರೀತಿಯಾಗಿ ಒಂದೇ ಸಮನೆ ಎಲ್ಲಾ ಕಡೆಯಲ್ಲೂ ಬೀಳುವುದಿಲ್ಲ. ಕೆಲವು ಕಾಲ ಉತ್ತಾರಾರ್ಧ ಗೋಳದಲ್ಲಿ ಹೆಚ್ಚಾಗಿ ಬೀಳುತ್ತದೆ. ಕೆಲವು ಕಾಲ ದಕ್ಷಿಣದಲ್ಲಿ ಹೆಚ್ಚಾಗಿ ಬೀಳು ತ್ತದೆ....'

ನಡುವೆ ಬಾಯಿ ಹಾಕಬೇಡವೆಂದು ನಾನು ಹೇಳಿದ ಮಾತ್ರಕ್ಕೆ ಆತ ಸುಮ್ಮನಿದ್ದಾನೇ? ಬಾಯಲ್ಲಿದ್ದ ತಂಬುಲ ಉಗುಳಿ ಬಾಯಿ ಒರಸಿಕೊಂಡು ನನ್ನ ಬಳಿಗೆ ಬಂದು, ನನ್ನ ಕೈಲಿದ್ದ ಚೆಂಡೂ ಟಾರ್ಚೂ ಇಸುಕೊಂಡ.

'ಇಕೊ ಈ ಬೆಳಕು ಚೆಂಡಿನಮೇಲೆ ಎಲ್ಲಾ ಕಡೆಗೂ ಒಂದೇ ರೀತಿ ಬೀಳ್ತಾ ಇಲ್ವೆ ದೇವರು? ಮತ್ತೆ ಸೂರ್ಯನ ಬೆಳಕೂ ಹಾಗೇ ಬೀಳಬೇಡವೆ? ಒಂದು ಕಡೆ ಹೆಚ್ಚು ಒಂದು ಕಡೆ ಕಡಮೆ ಹ್ಯಾಗೆ?'

ಮನಸ್ಸಿನಲ್ಲೇ ಮೆಚ್ಚಿಕೊಂಡು ಚೆಂಡು–ಟಾರ್ಚ್ ತೆಗೆದುಕೊಂಡು ಮೊದಲು ಮಾಡಿದೆ.

'ತಾತ, ಈ ಚೆಂಡು ಈಗ ನೆಟ್ಟಗೆ ನಿಂತಿದೆ. ಹಾಗಿಲ್ಲದೆ ಬಾಗಿ ಇದೆ ಅಂದುಕೋ. ಈಗ ನೋಡು. ಚೆಂಡಿಗೆ ಮೇಲಿನ ಅರ್ಧಭಾಗದಮೇಲೆ ಬೆಳಕು ಬೀಳದೆ ?'

ಟಾರ್ಚಿನ ಬೆಳಕು ಹಾಗೆ ಬೀಳುವಂತೆ ಸಾಕಷ್ಟುದೂರದಲ್ಲಿ ಚೆಂಡನ್ನು ಹಿಡಿದುಕೊಂಡೆ. ನಮ್ಮ ರಾಣೀವಾಸದವರು ಕಸೂತಿ ಹಾಕುವ ಉದ್ದನೆ ಸೂಜಿಯನ್ನು, ಎರಡೂ ಕಡೆ ಮೊನೆಯಿದ್ದುದನ್ನು, ತರಲು ಹೇಳಿದೆ. ಸುಬ್ಬ ಒಳಕ್ಕೆ ಹೋದ. ತಿಮ್ಮಯ್ಯ ಅಂದ—

'ದೇವರು, ನಮ್ಮ ಕರ್ಮಕ್ಕೆ ಭೂಗೋಳ ಹೀಗೆ ಬಾಗಿಲ್ಲ ತಾನೆ ?'

'ಅದೇ ತಾತ! ನಮ್ಮ ಭೂಮಿ ನೆಟ್ಟಗೆ ನಿಂತು ಪ್ರದಕ್ಷಿಣೆ ಮಾಡುತ್ತಿಲ್ಲ. ತನ್ನ ಪಥದ ಕಡೆ ಬಾಗಿಕೊಂಡು ತಿರುಗುತ್ತಿದೆ.'

ಇಷ್ಟರಲ್ಲಿ ಸುಬ್ಬ ಸೂಜಿ ತಂದ. ಅದನ್ನು ಚೆಂಡಿನಲ್ಲಿ ಚುಚ್ಚಿದೆ. ಚುಚ್ಚಿದ ಒಂದು ಕೊನೆಯನ್ನು ನನ್ನ ಬಲಗೈ ಹೆಬ್ಬೆರಳಿಗೂ ತೋರ್ಬೆರಳಿಗೂ ನಡುವೆ ಹಿಡಿದುಕೊಂಡೆ. ನನ್ನ ಕೈಲಿದ್ದ ಸೂಜಿಯ ಕೊನೆ ಪಡಸಾಲೆಯ ಒಂದು ಮೂಲೆಯನ್ನು ನೋಡುವ ಹಾಗೆ ಚೆಂಡನ್ನು, ಮೇಲಿಂದ ನೇತು ಬಿಟ್ಟಿದ್ದ ಲಾಂದ್ರಕ್ಕೆ ಇದಿರಾಗಿ, ಬಾಗಿಸಿ ಹಿಡಿದುಕೊಂಡೆ.

'ಇಕೋ, ಈ ದೀಪವೆ ಸೂರ್ಯ. ಈ ಚೆಂಡು ಭೂಗೋಳ. ನಾನು ಹಿಡಿದುಕೊಂಡಿರುವ ಸೂಜಿ ಭೂಗೋಳದ ನಡುವೆ ಶಾಸ್ತ್ರಜ್ಞರು ಊಹಿಸಿದ ಅಚ್ಚು. ನನ್ನ ಬೆರಳ ನಡುವೆ ಇರುವ ಸೂಜಿಯ ಮೊನೆಗೆ ನೇರಾಗಿ ಇರುವ ಆ ಮೂಲೆಯೆ ಧ್ರುವನಕ್ಷತ್ರ. ತಿಳಿಯಿತೆ ? ಈ ಭೂಗೋಳ ಹೀಗೆ ಬಾಗಿಕೊಂಡು ತನ್ನ ಸುತ್ತ ತಿರುಗುತ್ತಾ ಸೂರ್ಯನ ಸುತ್ತಲೂ ತಿರುಗುತ್ತಿದೆ. ಹೀಗೆ........'

ಹೇಳುತ್ತಾ, ಚೆಂಡನ್ನು ಬುಗರಿಯ ಹಾಗೆ ತಿರುಗಿಸುತ್ತ, ದೀಪದ ಸುತ್ತಲೂ ತಿರುಗಿಸಿದೆ. ದೀಪದಕಡೆ ಬಾಗಿರುವ ಹಾಗೆ, ಮೇಲೆ ಹೇಳಿದ ಸೂಜಿಯ ಮೊನೆ ಆ ಪಡಸಾಲೆಯ ಮೂಲೆಯನ್ನೇ ನೋಡುವ ಹಾಗೆ.

ಸ್ವಲ್ಪ ಅಭ್ಯಾಸದಿಂದ ಯಾರಾದರೂ ಇದನ್ನು ಮಾಡಬಹುದು. ಚೆಂಡೇ ಬೇಕಾಗಿಲ್ಲ. ಕಿತ್ತಿಲೆ ಹಣ್ಣೋ ಮೊಸಂಬಿಯೋ ಗುಂಡಗೆ ಇರುವ ಯಾವ ಹಣ್ಣಾದರೂ ಸರಿಯೆ. ಮೇಲುಭಾಗ ಉತ್ತರ. ಅದು ಒಂದು ಸಲ

ದೀಪದ ಕಡೆ ಬಾಗಿರುವ ಹಾಗೆ ಹಿಡಿದುಕೊಳ್ಳಬೇಕು ; ದೀಪದ ಬೆಳಕು ಚೆಂಡಿನ ಮೇಲರ್ಧಭಾಗದಮೇಲೆ ಹೆಚ್ಚಾಗಿ ಬೀಳದಂತೆ. ಮತ್ತೊಂದು ಸಲ ಕೆಳಗಿನ ಕೊನೆ ದೀಪದ ಕಡೆ ಬಾಗಬೇಕು. ಆಗ ದೀಪದ ಬೆಳಕು ಕೆಳ ಅರ್ಧ ಭಾಗದ ಮೇಲೆ ಹೆಚ್ಚಾಗಿ ಬೀಳಬೇಕು. ಆದರೆ ಉತ್ತರದ ಕೊನೆ ಮಾತ್ರ ಯಾವಾಗಲೂ ಒಂದೇ ಮೂಲೆಯನ್ನು ನೋಡುತ್ತಿರಬೇಕು. ಆ ಮೂಲೆಯಲ್ಲಿ ಧ್ರುವ ಇದಾನೆ ಎಂದ ಹಾಗೆ. ಚಿಕ್ಕಲಾಂದ್ರ ಸಾಕು. ಒಂದು ಸಂಗತಿ ಮಾತ್ರ ಖಂಡಿತ ನೆನಪಿರಬೇಕು : ದೀಪ, ಚೆಂಡು, ಎರಡೂ ಒಂದೇ ಮಟ್ಟದಲ್ಲಿರಬೇಕು. ಖಗೋಳದಲ್ಲಿ ಸೂರ್ಯ ಭೂಮಿ ಒಂದೇ ಮಟ್ಟದಲ್ಲಿ ಇದಾರಲ್ಲ!

ಸರಿಯೆ, ಮಾತಿನ ಗುಂಗಿನಲ್ಲಿ ಬಿದ್ದೆವು....ನಮ್ಮ ಪುರಾಣ ಕಾಲಕ್ಷೇಪದಲ್ಲಿ ಏನಾಯಿತೋ ಕೇಳಿ ಮತ್ತೆ. ಏನು ? ತಲೆನೋವೆ ? ಏನು ಮಾಡುತ್ತೀರಿ ಪಾಪ ! ಕೇಳಲಿಕ್ಕೆ ಮೊದಲು ಇಟ್ಟಿದೀರಿ. ಕೊನೆಯ ತನಕ ತಾಳ್ಮೆಯಿರಬೇಕು. ಇದು ಶಾಸ್ತ್ರ....

ಸುಬ್ಬನ ನಕ್ಷೆಗಳ ಪುಸ್ತಕದಲ್ಲಿ ಋತುಗಳ ಚಿತ್ರ ತೆಗೆದೆ.

‘ನಡುವೆ ಇರುವುದು ಸೂರ್ಯ. ಇಕೊ, ತನ್ನ ಪಥದಮೇಲೆ ತಿರುಗುತ್ತಿರುವ ಭೂಗ್ರಹ. ೧. ೨. ೩. ೪. ನಾಲ್ಕು ಮುಖ್ಯದೆಶೆ ನೋಡುತ್ತಿದೇವೆ. ಒಂದೊಂದು ದೆಶೆಗೂ ೩ ತಿಂಗಳ ಅಂತರ. ೧೨ ತಿಂಗಳಿಗಲ್ಲವೆ ಮತ್ತೆ ಭೂಮಿ ಸೂರ್ಯ ಪ್ರದಕ್ಷಿಣೆ ಮಾಡುವುದು ! ....

ಚೈತ್ರದಿಂದ ಫಾಲ್ಗುಣದವರೆಗೆ ೧೨ ತಿಂಗಳು ಭೂಮಿ ಈಗ ಹೇಳಿದ ಹಾಗೆ ಬಾಗಿ ತಿರುಗುತ್ತಿದ್ದರೆ ಹೇಗೆ ಕಾಣಿಸುತ್ತದೆ ಗೊತ್ತೆ ? ನಮ್ಮ ಭೂಗೋಳದ ನಡು ಭಾಗದಿಂದ ಕೆಲವು ಕಾಲ ಉತ್ತರಾರ್ಧ ಗೋಳದಲ್ಲೂ ಕೆಲವು ಕಾಲ ದಕ್ಷಿಣಾರ್ಧ ಗೋಳದಲ್ಲೂ ಸೂರ್ಯ ಪ್ರಯಾಣ ಮಾಡುತ್ತಿದ್ದ ಹಾಗೆ ಕಾಣುತ್ತದೆ.

ವರ್ಷಕ್ಕೆ ಎರಡು ಸಲ ಭೂಮಿಯ ಮಧ್ಯಭಾಗದಲ್ಲಿ ಸಾಲಾಗಿ ಇರುವ ಪ್ರದೇಶಗಳ ನಡು ನೆತ್ತಿಯ ಮೇಲೆ ಕಾಣಿಸುತ್ತಾನೆ ಸೂರ್ಯ. ಈ ಸೀಮೆಯನ್ನೆಲ್ಲಾ ಸೇರಿಸಿ, ಅಲ್ಲಿ ಒಂದು ಗೆರೆ ಊಹಿಸಿ, ಅದಕ್ಕೆ ಭೂಮಧ್ಯ ರೇಖೆ ಎಂದು ಹೆಸರಿಟ್ಟಿದಾರೆ. ಹೀಗೇ ಉತ್ತರಾರ್ಧಗೋಳದಲ್ಲಿ ವರ್ಷಕ್ಕೆ ಒಂದು ಸಲ ಸೂರ್ಯ ಕೆಲವು ಪ್ರದೇಶಗಳಲ್ಲಿ ನೆತ್ತಿಯ ಮೇಲೆ ಬರುತ್ತಾನೆ.

ಈ ಸೀಮೆಗಳನ್ನೆಲ್ಲ ಕಲೆಸಿ ಒಂದು ಗೆರೆ ಎಳೆದಿದಾರೆ. ಅದಕ್ಕೆ **ಕರ್ಕಾಟಕ ರೇಖೆ** ಎನ್ನುತ್ತಾರೆ. ವರ್ಷದಲ್ಲಿ ಇನ್ನೊಂದು ಸಲ ದಕ್ಷಿಣಾರ್ಧ ಗೋಳದಲ್ಲೂ ಹೀಗೇ ಕೆಲವು ಪ್ರದೇಶಗಳ ನೆತ್ತಿಯ ಮೇಲೆ ಕಾಣುತ್ತಾನೆ ಸೂರ್ಯ. ಆ ಪ್ರದೇಶಗಳನ್ನು ಸೇರಿಸುವ ರೇಖೆ **ಮಕರ ರೇಖೆ**.'

'ದೇವರು, ಕರ್ಕಾಟಕ–ಮಕರ ಇವು ರಾಶಿಗಳ ಹೆಸರಲ್ಲವೆ?'

'ಹೌದು. ಸೂರ್ಯ ಆ ರಾಶಿಗಳಲ್ಲಿದ್ದಾಗಲೇ ಮೇಲೆ ಹೇಳಿದ್ದು ನಡೆಯುತ್ತದೆ.'

'ಅಂದರೆ, ಉತ್ತರದಲ್ಲಿ ಕರ್ಕಾಟಕ ರೇಖೆ, ದಕ್ಷಿಣದಲ್ಲಿ ಮಕರ ರೇಖೆಗಳಿಗೆ ನಡುವೆ ಸೂರ್ಯ ತಿರುಗುತಿದಾನೆ ಎಂತ ಅಲ್ಲವೆ, ಮೇಷ್ಟ್ರೆ?'

'ತಿರುಗುತ್ತಿರುವ ಹಾಗೆ ನಮಗೆ ಅನಿಸುತ್ತದೆ. ನಿಜವಾಗಿ ಭೂಮಿಯೆ ಬಾಗಿಕೊಂಡು ತಿರುಗುತ್ತಿದೆ.'

ಚೆಂಡನ್ನು ಬಾಗಿಸಿ ಹಿಡಿದು ಋತುಗಳ ಪಟದಲ್ಲಿ ನಾಲ್ಕು ದಶೆಗಳನ್ನೂ ತೋರಿಸಿದೆ.

'ವರ್ಷದಲ್ಲಿ ಆರು ತಿಂಗಳು, ಮಾಘದಿಂದ ಶ್ರಾವಣದವರೆಗೂ ಸೂರ್ಯ ಭೂಮಧ್ಯರೇಖೆಯಿಂದ ಉತ್ತರಾರ್ಧ ಗೋಳದಲ್ಲಿ ಉತ್ತರಕ್ಕೆ ಕರ್ಕಾಟಕ ರೇಖೆಯವರೆಗೂ ಹೋಗಿ, ಅಲ್ಲಿಂದ ದಕ್ಷಿಣಕ್ಕೆ ತಿರುಗಿ ಮತ್ತೆ ಭೂಮಧ್ಯರೇಖೆಗೆ ಬರುತ್ತಾನೆ. ಇದು **ಉತ್ತರಾಯಣ**. ಉಳಿದ ಆರು ತಿಂಗಳೂ ಶ್ರಾವಣದಿಂದ ಮತ್ತೆ ಮಾಘ ಬರುವತನಕ ಭೂಮಧ್ಯ ರೇಖೆಯಿಂದ ದಕ್ಷಿಣಕ್ಕೆ ಮಕರರೇಖೆಯವರೆಗೂ ಹೋಗಿ, ಮತ್ತೆ ಉತ್ತರಕ್ಕೆ ತಿರುಗಿ ಭೂಮಧ್ಯರೇಖೆಗೆ ಬಂದು ಸೇರುತ್ತಾನೆ. ಇದು **ದಕ್ಷಿಣಾಯನ** ಕಾಲ. ಚಿತ್ರದಲ್ಲಿ ಇವು ನಾಲ್ಕು ಕಾಲಗಳನ್ನೂ ಗುರುತುಹಾಕೋಣ....'

ಸುಬ್ಬನಿಗೆ ಒಂದು ಹಂಚಿಕಡ್ಡಿ ತರಲು ಹೇಳಿದ. ಅದರಿಂದ ಪಟವನ್ನು ತೋರಿಸುತ್ತ ಮತ್ತೆ ಪ್ರಾರಂಭಿಸಿದೆ.

'........ ಮೂಡಲಿಂದ ಮೊದಲಿಡೋಣ. ಇಲ್ಲಿ, ಸೂರ್ಯ ಭೂಮಧ್ಯರೇಖೆಯ ಮೇಲೆ ಇದಾನೆ. ರಾತ್ರಿ ಹಗಲು ಸಮಾನ. ತುಲಾ ಸಂಕ್ರಾಂತಿ. ಇದನ್ನು **ವಿಷುವ** ಅನ್ನುತ್ತಾರೆ.

ಇಲ್ಲಿಂದ ಮೂರು ತಿಂಗಳಿಗೆ ಎರಡನೆ ಪರಿಸ್ಥಿತಿ. ಈ ಮೂರು

ತಿಂಗಳಲ್ಲಿ ನಮಗೆ, ಉತ್ತರಾರ್ಧದಲ್ಲಿರುವವರಿಗೆ, ಕ್ರಮವಾಗಿ ಹಗಲು ಹೆಚ್ಚು ತ್ತಿರುತ್ತದೆ. ಇಲ್ಲಿ ಸೂರ್ಯ ಕರ್ಕಾಟಕ ರೇಖೆಯಮೇಲೆ ಇದಾನೆ. ಆವೊತ್ತು ಸೂರ್ಯ ಮುಳುಗುವುದೇ ಇಲ್ಲವೆ ಎಂಬಷ್ಟು ಹಗಲು! ಇಲ್ಲಿಯ ಸ್ಥಿತಿಯನ್ನು ಸ್ವಲ್ಪ ವಿವರವಾಗಿ ನೋಡೋಣ. ಈ ಸ್ಥಿತಿಯಲ್ಲಿ ಸೂರ್ಯ ಕಿರಣಗಳಿಗೂ ಭೂಮಿಗೂ ಎಷ್ಟು ದೂರವಿದೆಯೇ. ಅಳೆಯೋಣ....'

ಹಂಚಿಕಡ್ಡಿಯನ್ನು ಚಿಕ್ಕದಾಗಿ ಸೀಳಿ ಆ ದೂರವನ್ನು ಆಳೆಯುತ್ತ ಹೇಳಿದೆ. '.... ದಕ್ಷಿಣ ಧ್ರುವ ಸೂರ್ಯನಿಗೆ ಮರೆಯಾಗಿ ಅತ್ತಕಡೆ ತಿರುಗಿದೆ. ಉತ್ತರ ಧ್ರುವ ಸೂರ್ಯನ ಕಡೆ ನೋಡುತ್ತಾ ಇದೆ. ಆದ್ದರಿಂದ ಉತ್ತರಾರ್ಧ ಗೋಳ ಸೂರ್ಯನಿಗೆ ಹತ್ತಿರ ; ದಕ್ಷಿಣದರ್ಧ ದೂರ. ಒಲೆಗೆ ಹತ್ತಿರ ಇದ್ದರೆ ಸೆಕೆ ಹೆಚ್ಚು ಅಲ್ಲವೆ, ದೂರ ಇದ್ದಾಗಿನಕಿಂತ ? ಆದ್ದರಿಂದ ಉತ್ತರಾರ್ಧ ಗೋಳದಲ್ಲಿ ಕಾವು ಹೆಚ್ಚು. ನಮಗೆ ಆಗ ನಡು ಬೇಸಗೆ ; ದಕ್ಷಿಣಾರ್ಧ ಗೋಳದಲ್ಲಿ ನಡು ಚಳಿಗಾಲ. ಉತ್ತರಾರ್ಧ ಗೋಳದಲ್ಲಿ ಹೀಗೆ ಬಿಸಿ ಏರು ವುದು ಮಾಘ ಮಾಸದಿಂದ ಪ್ರಾರಂಭ. ಈ ಮೂರೂ ತಿಂಗಳು ಕ್ರಮೇಣ ಕಾವು ಹೆಚ್ಚಿ, ಸೂರ್ಯ ಕರ್ಕಾಟಕ ರಾಶಿಗೆ ಇರುವ ಹೊತ್ತಿಗೆ ಚೆನ್ನಾಗಿ ಬಾಣಲಿ ಹದಕ್ಕೆ ಬರುತ್ತದೆ. ಉತ್ತರಾಯಣದಲ್ಲಿ ಸೂರ್ಯ ಉತ್ತರಾರ್ಧ ಗೋಳದಲ್ಲಿ ತನ್ನ ಉತ್ತರದ ಎಲ್ಲೆಯನ್ನು ಮುಟ್ಟಿದ. ಇಲ್ಲೊಂದು ವಿಚಿತ್ರ ನೋಡಿದಿರಾ ? ಉತ್ತರ ಧ್ರುವದ ಸೀಮೆ ಬೆಳಗಿದೆ. ಅಲ್ಲಿ ಸೂರ್ಯೋದಯ. ಹಗಲು ಪ್ರಾರಂಭವಾಗುತ್ತಿದೆ! ಆರು ತಿಂಗಳವರೆಗೂ ಇರುವ ಹಗಲು!....'

'ಆರು ತಿಂಗಳೆ ? ಪೂರ್ತಿ ....' ಎಂದ ತಾತ. 'ಹೌದು, ಆರು ತಿಂಗಳು! ಆಗಲೇ ದಕ್ಷಿಣ ಧ್ರುವ ಸೀಮೆಯಲ್ಲಿ ರಾತ್ರಿ ಪ್ರಾರಂಭ. ಆರು ತಿಂಗಳ ರಾತ್ರಿ ! ಅದಕ್ಕೇ ಪಟದಲ್ಲಿ ಕಪ್ಪುಬಣ್ಣ.

ಈಗ ಕರ್ಕಾಟಕ ರೇಖೆಯಿಂದ ದಕ್ಷಿಣಕ್ಕೆ ಹೋಗುತ್ತಿದಾನೆ ಸೂರ್ಯ. ಮೂರನೆಯ ಘಟ್ಟ ಮೇಷ ಸಂಕ್ರಾಂತಿ. ನಮಗೆ ಬಹಳ ಮುಖ್ಯವಾದ ಹಬ್ಬ. ಸೂರ್ಯ ಮತ್ತೊಂದು ಸಲ ಭೂಮಧ್ಯ ರೇಖೆಯ ಮೇಲಕ್ಕೆ ಬರು ತ್ತಾನೆ. ರಾತ್ರಿ ಹಗಲು ಮತ್ತೊಂದು ಸಲ ಸರಿಸಮ, ಮತ್ತೊಂದು ವಿಷುವ ಆವೊತ್ತು. ಉತ್ತರ ಧ್ರುವ ಪ್ರಾಂತದಲ್ಲಿ ನಡು ಹಗಲು ; ಸೂರ್ಯ ಹುಟ್ಟಿದ ಮೂರು ತಿಂಗಳಿಗೆ!!

ಉತ್ತರಾಯಣ ಮುಗಿಯಿತು. ದಕ್ಷಿಣಾಯನ ಪ್ರಾರಂಭ. ಕ್ರಮ ಕ್ರಮವಾಗಿ ನಮಗೆ ಇರುಳು ಹೆಚ್ಚಾಗುತ್ತ ಬರುತ್ತದೆ. ಆನೆ ಘಟ್ಟದಲ್ಲಿ ಮಕರರೇಖೆಯ ಮೇಲೆ ಸೂರ್ಯ. ನಮಗೆ ನಡು ಚಳಿಗಾಲ. ಸೂರ್ಯ ಹುಟ್ಟುತ್ತಾನೆಯೆ ಎಂಬಷ್ಟು ದೀರ್ಘವಾದ ರಾತ್ರಿ. ದಕ್ಷಿಣಾರ್ಧಗೋಳ ದಲ್ಲಿ ನಡು ಬೇಸಗೆ.... '

'ಹೌದು ಮೇಷ್ಟ್ರೆ. ಈಗ ದಕ್ಷಿಣಾರ್ಧಗೋಳ ಸೂರ್ಯನಿಗೆ ಸಮೀಪ!'

'ಉತ್ತರ ಧ್ರುವವನ್ನು ನೋಡು. ಅಲ್ಲಿ ಕಪ್ಪಗಿದೆ. ಅಲ್ಲಿ ಸೂರ್ಯ ಮುಳುಗಿ ದಾನೆ.'

'ಅಂದರೆ ದಕ್ಷಿಣದಲ್ಲಿ ಹೊತ್ತು ಹುಟ್ಟುತ್ತದೆ ಅಂತಲೇ, ದೇವರು ?' ತಾತ ಎಳೆ ಕೂಡಿಸಿದ.

'ಅದೇ ಸಂಗತಿ! ದಕ್ಷಿಣಧ್ರುವ ಪ್ರಾಂತದಲ್ಲಿ ಆರು ತಿಂಗಳ ಹಗಲು ಪ್ರಾರಂಭ. ಆ ಮೂರು ತಿಂಗಳೂ ಸೂರ್ಯ ಮಕರರೇಖೆಯಿಂದ ಉತ್ತರದ ಕಡೆ ಭೂಮಧ್ಯರೇಖೆಯ ಕಡೆಗೆ ಹೋಗುತ್ತಾನೆ. ಮತ್ತೆ ವಿಷುವ; ತುಲಾ ರಾಶಿಯಲ್ಲಿ ಸೂರ್ಯ! ತಿರುಗಿ ಬಂದು ದಕ್ಷಿಣಧ್ರುವ ಪ್ರಾಂತದಲ್ಲಿ ನಡುಹಗಲು. ರಾತ್ರಿ ಹಗಲು ಸಮ........ಇದು ಕಥೆ, ಈ ಋತುಗಳ ಕಥೆ!'

ತಿಮ್ಮಯ್ಯ ದೂರವಾಗಿ ಪಡಸಾಲೆಯ ಅಂಚಿಗೆ ಹೋಗಿ ತಂಬುಲ ಮೆಲ್ಲುತ್ತಿದಾನೆ. ಸುಬ್ಬ ಚಿತ್ರವನ್ನು ನೋಡುತ್ತಾ ಚೆಂಡು ಆಡುತ್ತಿದಾನೆ.

ಸ್ವಲ್ಪ ಹೊತ್ತು ವಿರಾಮ. ಮತ್ತೆ ತಾತ ಅಲುಗಾಡಿಸಿದ. 'ದೇವರು, ಚಳಿಗಾಲ ಬೇಸಗೆಗಳ ಮಾತು ಹೇಳಿದಿರಿ. ಉಳಿದವೋ ಮತ್ತೆ ? ವಸಂತ ಕಾಲ ಮಳೆಗಾಲ ?'

'ಮುಖ್ಯವಾದದ್ದು ಗ್ರೀಷ್ಮ ಶಿಶಿರ, ತಾತ. ಉಳಿದವು ಇವೆರಡರ ನಡುವೆ ಬರುತ್ತವೆ. ಒಟ್ಟು ಆರು ಋತುಗಳು. ಎರಡು ತಿಂಗಳಿಗೊಂದು. ಉತ್ತರಾಯಣದ ಆರು ತಿಂಗಳಲ್ಲಿ ವಸಂತ, ಗ್ರೀಷ್ಮ, ವರ್ಷ ಋತುಗಳು. ದಕ್ಷಿಣಾಯನ ಕಾಲದಲ್ಲಿ ಶರತ್, ಶಿಶಿರ, ಹೇಮಂತ.'

'ಮಳೆಗೆ ಕಾರಣ ಸೂರ್ಯನಾರಾಯಣನೇ ಎನ್ನಲಿಲ್ಲವೆ?'

'ಒಂದು ರೀತಿಯಲ್ಲಿ ಅದೇ ಸರಿ. ಕಡಲನೀರು ಬೇಸಗೆಯ ಬಿಸಿಲಿನ ಝಳಕ್ಕೆ ಇಂಗಿ, ಆವಿಯಾಗಿ ಮೋಡವಾಗುತ್ತದೆ. ಗಾಳಿಯ ಜೊತೆಗೆ ಈ

ಮೋಡಗಳೂ ತಿರುಗುತ್ತವೆ. ಈ ಮೋಡಗಳು ತಣ್ಣಗೆ ಆದರೆ ನಮಗೆ ಮಳೆ. ಕೆಲವು ದೇಶಗಳಲ್ಲಿ ಈ ಮಳೆ ಕೆಲಕೆಲವು ಋತುಗಳಲ್ಲೇ ಬೀಳುತ್ತದೆ. ನಮ್ಮ ದೇಶ ಅಂಥಾದ್ದೇ ! ಮೊದಲು ಮಳೆಗಾಲದಲ್ಲಿ ದೇಶದ ನೈರುತ್ಯ ದಿಕ್ಕಿನಿಂದ ಬೀಸುವ ಗಾಳಿ ಈ ಮಳೆಗೆ ಕಾರಣ. ಮತ್ತೆ ಎರಡನೆ ಸಲ ಹೇಮಂತ–ವಸಂತ ಋತುಗಳ ಮಧ್ಯಕಾಲದಲ್ಲಿ ಈಶಾನ್ಯ ದಿಕ್ಕಿನಿಂದ ಬರುವ ಗಾಳಿ ಈ ಮಳೆ ಸುರಿಯುತ್ತದೆ.'

ತಲೆ ಅಲ್ಲಾಡಿಸುತ್ತ ಎಲೆ ಅಡಿಕೆ ಮೆಲ್ಲುತ್ತ ಕೂತಿದಾನೆ ತಿಮ್ಮಯ್ಯ.

'ಭೂಮಿ ಬಾಗಿರದೆ ಇದ್ದರೆ ಏನಾಗುತ್ತಿತ್ತು ಸ್ವಾಮಿ ?'

'ಇದೇನು ತಾತ, ಮತ್ತೆ ರಾಮನಿಗೆ ಸೀತೆ ಏನಾಗಬೇಕು ಅಂತ ಕೇಳಿದ ಹಾಗಿದೆಯಲ್ಲ ! ಏನಾಗುತ್ತದೆ ? ಋತುಗಳಿಲ್ಲ. ಭೂಗೋಳದಲ್ಲಿ ಎಲ್ಲಾ ಕಡೆಯೂ, ಆ ಧ್ರುವದಿಂದ ಈ ಧ್ರುವದವರೆಗೆ, ಹಗಲೂ ಇರುಳೂ ಸಮವಾಗುತ್ತವೆ.'

ತಾತ ಯಾವುದೋ ತತ್ವ ಧೋರಣದಲ್ಲಿದ್ದ. ಸುಬ್ಬನನ್ನು ಗದರಿಸಲಿಲ್ಲ.

'ಇದರಲ್ಲಿ ಎಷ್ಟು ಮಜಾ ಇದೆ ! ಭಗ ಭಗ ಉರಿ, ಒಂದು ಹನಿ, ಅಷ್ಟರಲ್ಲೆ ಚಳಿ ! ಇದೂ ಒಂದು ರೀತಿಯೊಳಗೆ ಚಮಕ್ಕೇ. ಯಾವಾಗಲೂ ಪಂಜೂ ಮಂಜೂ ಆದರೆ ಏನು ಗತಿ ?'

'ಮೇಷ್ಟ್ರೆ, ನಮ್ಮ ತಿಂಗಳಿಗೂ ಅವರ ತಿಂಗಳಿಗೂ ಲೆಕ್ಕದಲ್ಲಿ ಹೆಚ್ಚು ಕಡಮೆಯಲ್ಲವೆ ?'

'ಎಲ್ಲೋ ಸ್ವಲ್ಪ ಇದೆ.'

ತಾತ ಮೇಲಕ್ಕೇಳುತ್ತ 'ಹೌದು, ನಮಗೆ ಅಧಿಕಮಾಸ, ಅದೂ ಇದೂ ಏನೇನೋ ಗೊಂದಲವಿದೆ' ಎಂದ.

ಚಂದ್ರ ಮೇಲೇರಿ ಬಂದು ಬಹಳ ಹೊತ್ತಾಯಿತು. ಮೇಲೆ ನೋಡುತ್ತ—

'ನಾಳೆ ಹುಣ್ಣಿಮೆ. ಭೂದೇವಿಯ ನೆರಳು ಈತನ ಮೇಲೆ ಬಿದ್ದರೆ ಚಂದ್ರಗ್ರಹಣ ಎಂದಿರಲ್ಲವೆ ? ಬರುವ ಹುಣ್ಣಿಮೆಗೆ ಚಂದ್ರಗ್ರಹಣವಂತೆ. ಆ ಮಾತೇ ಹೇಳಲಿಲ್ಲವಲ್ಲ, ಅಯ್ಯನೋರೆ' ಎನ್ನುತ್ತ ಹೊರಟ.

'ಇತರ ಗೋಳಗಳಿಗಿಂತ ಭೂಗೋಳ ನಿಜವಾಗಿ ದೊಡ್ಡದಲ್ಲವೆ, ಮೇಷ್ಟ್ರೆ ?' ಎಂದ ಸುಬ್ಬ.

ಬಾಗಿಲು ಹಾಕಿಕೊಳ್ಳುತ್ತಿದ್ದ ತಾತ, 'ಅಲ್ಲವೆ-ಮತ್ತೆ ? ಕೈಕಾಲು ಆಡಿಸುತ್ತಾ ಪದ್ಯ ಬೇರೆ ಓದಿದೆ. ಮನೆಯ ಮಗಳು; ಈಕೆಯ ಹೊಟ್ಟೆಯೇ ಅಲ್ಲವೆ ನಾಲ್ಕು ಹೀಚು ಬಿಟ್ಟದ್ದು. ಆಹಾ! ಏನು ಮಕ್ಕಳೋ! ಹಾಲು ಕುಡಿದ ಕೆಚ್ಚಲನ್ನೇ ಹಾಯುವ ಗುದ್ದುವ ಜಾತಿ. ಈ ಯುದ್ಧ, ಈ ನೆತ್ತರು ಕಾಲುವೆ! ಏನು ಇದೆಲ್ಲಾ ? ಮಹಾಲಕ್ಷ್ಮಿ, ಹೇಗೆ ಸೈರಿಸುತ್ತಾಳೋ!'

ನನ್ನೊಳಗೆ ನಾನೇ ನಕ್ಕೆ. ಎಷ್ಟು ಹೇಳಿದರೂ ಈ ನಂಬಿಗೆ ಈ ಜನರಲ್ಲಿ ಇಷ್ಟು ಆಳವಾಗಿ ಬೇರೂರಿದೆಯಲ್ಲ ಎಂದುಕೊಂಡೆ. ಅದರಲ್ಲೂ ಈತ ಒಂದು ಶತಮಾನದ ಹಿಂದಿನವನು!



೯

## ಭೂದೇವಿಯ ಮುದ್ದಿನ ಮಗು – ಚಂದ್ರ

ಹುಣ್ಣಿಮೆ ಚಂದ್ರ ಬೆಳ್ಳಗೆ ಮಲ್ಲಿಗೆ ಹೂವಿನ ಮಳೆ ಸುರಿಸುತ್ತಿದಾನೆ. ಬೆಳುದಿಂಗಳಲ್ಲಿ ಮಂಚ ಹಾಕಿದೇವೆ. ಸುಬ್ಬ ಆದೇ ಊಟಮಾಡಿ ಬಂದಿ ದಾನೆ. ಹಾಸಿಗೆ ಕೊಡವುತ್ತ, ಸಣ್ಣಗೆ ರಾಗ ತೆಗೆಯುತ್ತ ಚಂದ್ರ ವರ್ಣನೆಯ ಪದ್ಯವೊಂದನ್ನು ಹೇಳುತ್ತಿದಾನೆ. ಆ ಪದ್ಯ ಹೇಳುತ್ತ ಅವನಿಗೊಂದು ಪ್ರಶ್ನೆ ತೋಚಿತು.

'ಈ ಮಚ್ಚೆ ಏನು ಮೇಷ್ಟ್ರೆ ? ಒಬ್ಬರು ಮೊಲ ಅನ್ನುತ್ತಾರೆ. ಒಬ್ಬರು ಆಲದಮರ ಅನ್ನುತ್ತಾರೆ. ಇನ್ನೊಬ್ಬರು....'

ತಿಮ್ಮಯ್ಯ ಸುಬ್ಬನ ಮಾತಿಗೆ ಅಡ್ಡ ಬಂದ.

'ಜಿಂಕೆ ಅನ್ನುತ್ತಾರಯ್ಯ. ಯಾವುದು ನಿಜ ಸ್ವಾಮಿ.'

ತಾತ ಬೆಂಚಿನ ಮೇಲೆ ಅಂಗಾತನಾಗಿ ಮಲಗಿದಾನೆ. ನಾನೂ ಮಂಚದ ಮೇಲೆ ಮಲಗಿದೇನೆ.

'ಚಂದ್ರನಲ್ಲಿ ನಮಗೆ ಕಾಣಿಸುವುದು ಬೆಟ್ಟಗಳು, ಸುಬ್ಬ ?

'ಏನು ಮೇಷ್ಟ್ರೆ, ಬೆಟ್ಟಗಳೇ ?'

'ನಿಚ್ಚಳವಾಗಿ ದೂರದರ್ಶಕದಲ್ಲಿ ಕಾಣುತ್ತ ಇದ್ದರೆ ನಂಬದಿರುವುದು ಹೇಗೆ ?'

'ನಮ್ಮ ಚಿತ್ರದುರ್ಗದ ಬೆಟ್ಟಗಳಂಥವೇನು ಸ್ವಾಮಿ ?'

'ಎಲ್ಲಿ ಚಿತ್ರದುರ್ಗದ ಬೆಟ್ಟ, ತಾತ ? ಚಂದ್ರನಲ್ಲಿರುವ ಬೆಟ್ಟಗಳಷ್ಟು ಎತ್ತರವಾದವು ನಮ್ಮ ಭೂಮಿಯಲ್ಲಿ ಎಲ್ಲೂ ಇಲ್ಲ.'

'ಎವರೆಸ್ಟಿಗಿಂತ ಎತ್ತರವೆ, ಮೇಷ್ಟ್ರೆ ?'

'ಹೌದು.'

‘ ಅದೇನಯ್ಯ ನೀ ಹೇಳಿದ್ದು ಈಗ ? ಎಂಥ ಎಷ್ಟು ಅದು ? ’

‘ ಎವರೆಸ್ಟು ಶಿಖರ, ತಾತ. ನಮ್ಮ ಹಿಮಾಲಯ ಪರ್ವತಗಳಲ್ಲಿ ಇದೆ ಈ ಭೂಗೋಳದಲ್ಲೆಲ್ಲಾ ಎತ್ತರವಾದ ಕೋಡುಗಲ್ಲು. ೨೯ ಸಾವಿರ ಅಡಿ. ಇನ್ನೂ ಯಾರೂ ಪೂರ್ತಿಯಾಗಿ ಹತ್ತಿಹೋಗಿಲ್ಲ ಅದನ್ನ.’

‘ ಹಾಗಾದರೆ ಬಿಳಿಯುವನಿಗೆ ಎಟುಕದ್ದೂ ಇದೆ, ಇನ್ನೂ ಸೃಷ್ಟಿಯಲ್ಲಿ ಇಷ್ಟು.’

‘ ಇದೇನು ತಾತ, ಮಾತಾಡಿದರೆ ಬಿಳಿಯುವನು ಅನ್ನುತ್ತೀಯೆ. ನಮ್ಮ ದೇಶದಲ್ಲೂ ದೊಡ್ಡ ದೊಡ್ಡ ಶಾಸ್ತ್ರಜ್ಞರಿದಾರೆ.’

ಒಳಗೊಳಗೇ ಹರುಷಗೊಂಡೆ. ಹಳ್ಳಿಗಾಡಿನಲ್ಲಿದ್ದರೂ ಅವಕಾಶಗಳಿಲ್ಲದಿದ್ದರೂ ಈ ಹುಡುಗನಿಗೆ ಇಷ್ಟುಮಟ್ಟಿನ ವಿಚಾರ ಬಂದಿದೆಯಲ್ಲ ಎಂತ. ತಾತ ಮುಗುಳುನಗೆ ನಕ್ಕು—

‘ಸ್ವಾಮಿ, ಬೆಟ್ಟಗಳು ಎಂದಿರಿ. ಅವುಗಳ ಮೇಲೆ ಗಿಡ ಗೆಂಟೆ ಏನೂ ಇಲ್ಲವಲ್ಲ. ಅದರಿಂದ ಈ ಆಲದ್ದೂ ಮೊಲದ್ದೂ ಕತೆ ಹುಟ್ಟವೆಯೋ ಏನೋ ? ’

‘ ಇಲ್ಲ ತಾತ, ಇಲ್ಲ. ಬೆಟ್ಟಗಳಲ್ಲದೆ ದೊಡ್ಡ ದೊಡ್ಡ ಮೈದಾನದಂಥ ತಗ್ಗು ಭೂಮಿಗಳೂ ಇವೆ. ಇವು ಸಮುದ್ರಗಳಿರಬಹುದು ಎಂದು ಒಂದು ಕಾಲಕ್ಕೆ ಶಾಸ್ತ್ರಜ್ಞರು ಅನುಮಾನಪಟ್ಟಿದ್ದರು. ಇವು ಕಡಲಲ್ಲ. ಬರೀ ಸಮನೆಲ. ಇನ್ನೊಂದು ಸೋಜಿಗ! ಚಂದ್ರಮಂಡಲದಲ್ಲಿ ಅಲ್ಲಲ್ಲಿ ಗುಂಡಾದ ಬಾವಿಗಳಂಥಾವು ಕಾಣುತ್ತಿವೆ. ’

ಫೋಟೋದಲ್ಲಿ ಚಂದ್ರ







ಮೊಳಕೈ ಊರಿ ಎದ್ದು ನನ್ನ ಕಡೆ ತಿರುಗಿ – ‘ ನಿಜವಾಗಿಯೂ ಬಾವಿಗಳೇ ?’ ಎಂದ.

‘ಎಣಿಸಿದಾರೆ. ದೊಡ್ಡ ಹೊಂಡಗಳ ಹಾಗೆ ಇವೆ. ಒಟ್ಟು ೩೦ ಸಾವಿರ. ಅರ್ಧ ಮೈಲಿಯಿಂದ ಹಿಡಿದು ೧೫೦ ಮೈಲಿಯ ತನಕ ಹೊಂಡದ ಬಾಯಿಯ ಅಗಲ. ಇವುಗಳಲ್ಲಿ ದೊಡ್ಡ ದೊಡ್ಡವಕ್ಕೆ ಸುತ್ತು ಕಟ್ಟಡದ ಹಾಗೆ ೧೦ ಸಾವಿರದಿಂದ ೨೦ ಸಾವಿರ ಅಡಿ ಎತ್ತರದ ಗೋಡೆಗಳಿವೆ. ಕೆಲವು ಹೊಂಡ

ಗಳಿಗೆ ಬಂಡಿಗಾಲಿಯ ಅರೆಗಾಲಿನಂತೆ ಸುತ್ತಲೂ ಕಾಲುವೆಗಳಿವೆ. ಇಷ್ಟೇ ಚಂದ್ರಲೋಕದಲ್ಲಿರುವುದು. ಇನ್ನೇನೂ ಇಲ್ಲ. ಗಾಳಿ ಇಲ್ಲ, ಒಂದು ಹನಿ ನೀರು ಕೂಡ ಇಲ್ಲ.'

'ಹಾಗಾದರೆ ಅಲ್ಲಿ ಯಾವ ಪ್ರಾಣಿ ಬದುಕೀತು? ಈ ಬಾವಿಗಳು ಹೇಗೆ ಹುಟ್ಟಿದವೋ ಮತ್ತೆ?'

'ನಾಲ್ಕಾರು ಸಿದ್ಧಾಂತ ಇವೆ. ಒಂದನ್ನು ಮಾತ್ರ ಅನೇಕ ಶಾಸ್ತ್ರಜ್ಞರು ನಂಬಿದಾರೆ, ಈಗ. ಚಂದ್ರಮಂಡಲದ ಮೇಲೆ ಉಲ್ಕೆಗಳು ಮಳೆಯ ಹಾಗೆ ಸುರಿದುದರಿಂದ ಈ ಹೊಂಡಗಳು ಬಿದ್ದವು ಎಂತ. ಉಲ್ಕಾಪಾತದಿಂದ ನಮ್ಮ ಭೂಮಿಯಲ್ಲೂ ಇಂಥ ದೊಡ್ಡಗುಂಡಿಗಳು ಬಿದ್ದವೆಂದು ಮೊದಲೇ ಹೇಳಿದ್ದೆ.'

'ಮೇಷ್ಟ್ರೆ, ಉಲ್ಕೆಗಳು ಗಾಳಿಯಲ್ಲಿ ಸುಟ್ಟು ಹೋಗವೆ?'

'ಇದೇನಯ್ಯ ಇಂಥ ಹುಚ್ಚು ಪ್ರಶ್ನೆ! ಚಂದ್ರನ ಸುತ್ತ ಗಾಳಿಯ ಹೊದಿಕೆಯೇ ಇಲ್ಲವಲ್ಲ. ಈ ಉಲ್ಕೆಗಳಿಗೆ ಅಡ್ಡವೇನಿದೆ? ಫಿರಂಗಿ ಗುಂಡಿ ನಂತೆ ತಗಲಿ ಹೊಂಡ ತೋಡಿವೆ.'

'ಹೇವರು, ಈತ ಗ್ರಹವಲ್ಲ ಎಂದಿರಲ್ಲವೆ?'

'ಅಲ್ಲ, ಉಪಗ್ರಹ. ಆಕೆಯ ಹೊಟ್ಟೆಯಲ್ಲಿ ಹುಟ್ಟಿದಾಗಿನಿಂದ ಭೂಮಿಯ ಸುತ್ತಲೂ ತಿರುಗುತ್ತಿದಾನೆ–ತಾಯಿಯನ್ನು ಬಿಡಲಾರದ ಮಗು ವಿನಂತೆ.'

ತಿಮ್ಮಯ್ಯ ಧಿಗ್ಗನೆ ಮೇಲಕ್ಕೆ ಎದ್ದ. ಬೆಂಚಿನ ಮೇಲೆ ಕೂತು, 'ಅಂಪರೆ, ಈ ಚಂದ್ರ ಭೂಮಿಯೊಳಗಿಂದ ಹುಟ್ಟಿಬಂದ ಅನ್ನಿ.'

'ಹಾಗೆ ಗಟ್ಟಿಯಾದ ಸಿದ್ಧಾಂತವಿದೆ. ಕೆಲವರು ಶಾಸ್ತ್ರಜ್ಞರು ಇದು ಅಲ್ಲ ಎನ್ನುತ್ತಾರೆ. ಆದರೂ ಈ ಸಿದ್ಧಾಂತವನ್ನು ಪೂರ್ತಿಯಾಗಿ ಅಲ್ಲವೆನ್ನಲು ಬಂದಿಲ್ಲ. ಭೂಗೋಳ ಸೂರ್ಯನ ಮೈಯ ತುಣುಕುಗಳಲ್ಲಿ ಒಂದು ತುಣು ಕಾಗಿ ಪ್ರಾರಂಭವಾಗಿ, ತಣ್ಣಗೆ ಆಗುತ್ತಿದ್ದಾಗ, ಒಂದು ಸ್ಥಿತಿಯಲ್ಲಿ ಚಂದ್ರ ಹುಟ್ಟಿದ ಅನ್ನುತ್ತಾರೆ. ಆಗ ಭೂಮಿ ಇನ್ನೂ ಪೂರ್ತಿಯಾಗಿ ಗಟ್ಟಿಯಾಗ ಲಿಲ್ಲ. ಆಗಲೇ ಉಂಡೆ ಕಟ್ಟಿ, ನಾರು ಸಾಗುತ್ತಿರುವ ಲಾಡುವಿನ ಸ್ಥಿತಿ ಯಲ್ಲಿ ಇದೆ. ಆದರೆ ತಿರುಗುತ್ತಾ ಇದೆ; ಗಿರ್ ಗಿರ್; ಬಹಳ ವೇಗವಾಗಿ.

ಈ ಬೀಸಿಗೆ ಭೂಗೋಳದ ಚಿಕ್ಕ ತುಂಡೊಂದು ಸಡಲಿ ಬೇರ್ಪಟ್ಟು ಭೂಮಿ ಯಿಂದ ಸಿಡಿದು ಹೋಯಿತು. ಭೂಮಿಗಿಂತ ಚಿಕ್ಕದಾದ್ದರಿಂದ ಬೇಗ ತಣ್ಣಗಾಯಿತು. ಆ ತುಂಡು. ಆ ತುಂಡೇ ಚಂದ್ರ. ಆವೊತ್ತಿನಿಂದ ಈವೊತ್ತಿನವರೆಗೂ ಭೂಮಿಯ ಸುತ್ತಲೂ ತಿರುಗುತ್ತಿದಾನೆ.'

ಸ್ವಲ್ಪ ಹೊತ್ತು ಹಾಗೇ ಚಂದ್ರಬಿಂಬದ ಕಡೆ ನೋಡುತ್ತ ಸುಮ್ಮನಿದ್ದ ತಾತ.

'ಯಾವಾಗಲೂ ಚಂದ್ರ ಒಂದೇ ಪಕ್ಕ ಕಾಣಲಿಕ್ಕೆ ಏನೋ ಕಾರಣ ಹೇಳಿದಿರಿ, ಮರೆತುಹೋದೆ.'

ಸುಬ್ಬ ಆ ಅನುಮಾನ ಪರಿಹಾರ ಮಾಡಿದ. 'ಚಂದ್ರ ತನ್ನ ಸುತ್ತ ತಾನು ಎಷ್ಟು ಹೊತ್ತಿನಲ್ಲಿ ತಿರುಗುತ್ತಾನೋ ಸರಿಯಾಗಿ ಅಷ್ಟೇ ಹೊತ್ತಿನಲ್ಲಿ ಭೂಮಿಯ ಸುತ್ತ ಪ್ರದಕ್ಷಿಣೆ ಮಾಡುತ್ತಾನೆ. ಅದರಿಂದ ನಮಗೆ ಯಾವಾಗಲೂ ಒಂದೇ ಪಕ್ಕ ಕಾಣಿಸುತ್ತದೆ; ಚಂದ್ರನಲ್ಲಿ ಅರ್ಧ ಮಾತ್ರ.'

'ಸುಬ್ಬ, ಇನ್ನೂ ಸ್ವಲ್ಪ ಹೆಚ್ಚು ಕೂಡ ಕಾಣಿಸುತ್ತದೆ. ಚಂದ್ರ ಸ್ವಲ್ಪ ಉಯ್ಯಾಲೆ ತೂಗುತ್ತಿದಾನೆ. ಅವನ ಪರಿಭ್ರಮಣದಲ್ಲಿ ಆ ತೂಗಿನಿಂದ ಅತ್ತ ಕಡೆಯದೂ ಸ್ವಲ್ಪ ಕಾಣುತ್ತಿದೆ. ಹೇಗಾದರೇನು? ಚಂದ್ರ ಗೋಳದಲ್ಲಿ ನೂರಕ್ಕೆ ೫೯ ಪಾಲು ಕಾಣಿಸುತ್ತದೆ. ಉಳಿದ ಭಾಗವೂ ಹೀಗೇ ಇರಬೇಕು ಎಂತ ಶಾಸ್ತ್ರಜ್ಞರು ನಿಶ್ಚಯಿಸಿದಾರೆ.'

ಊಟ ಮುಗಿಸಿ ಹೊರಗೆ ಬಂದ ಹುಡುಗರು ಬೀದಿಯಲ್ಲಿ ಆಟವಾಡುತ್ತಿದಾರೆ. ಹೊಸ ಮದವಣಿಗಿತ್ತಿ ಒಬ್ಬಳು ಹಟಮಾರಿ ಮಗುವಿಗೆ ಚಂದ್ರನನ್ನು ತೋರಿಸಿ ತುತ್ತು ಇಡುತ್ತಿದಾಳೆ. ಇದಿರು ಮನೆ ನರಸಯ್ಯನವರ ಸೊಸೆ ಪಡಸಾಲೆಯಿಂದ ಚಂದ್ರನ ಕಡೆ ನೋಡುತ್ತಿದಾಳೆ. ಆತ ಬೆಂಗಳೂರಿನಲ್ಲಿ ಕಾಲೇಜಿನಲ್ಲಿ ಓದುತ್ತಿದಾನೆ. ತಿಮ್ಮಯ್ಯ ನೆರೆತಮೀಸೆ ಸವರಿಸಿಕೊಳ್ಳುತ್ತ ಚಮತ್ಕಾರವಾಡಿದ.

'ಏನು ಡೇವರು, ಮನಸ್ಸು ಅತ್ತೆಮನೆ ಕಡೆ ಹೋಯಿತೇನು? ನಿಜವಾಗಿ ಈ ಚಂದ್ರನಲ್ಲಿ ಬಹಳ ಮಹಿಮೆಯಿದೆ. ನೋಡಿ: ಪಾಪ ಪುಣ್ಯ ಏನೂ ತಿಳಿಯದ ಹಸುಗೂಸುಗಳಿಂದ ನನ್ನಂಥವನ ತನಕ, ಊ, ಎಷ್ಟು ಖುಷಿಯೋ! ಮದ್ದಿಗೆ ಈತ, ಮುದ್ದಿಗೆ ಈತ; ಗಂಡ ಹೆಂಡರಿಗೀತ! ಇನ್ನೂ

ಎಷ್ಟೋ ಈತನ ಮಾಹಾತ್ಮ್ಯ! ಆದರೂ ಗುರುಗಳ ಮನೆಯಲ್ಲಿ ಮಾತ್ರ ಬುದ್ಧಿ ಮಣ್ಣುತಿಂದು ಈಗ ದಿನ ದಿನವೂ ಹಿಗ್ಗುತಾ ತಗ್ಗುತಾ ಇದಾನೆ. ಯಾವಾಗಲೂ ಹೀಗೇ ತುಂಬಿಕೊಂಡು ಇದ್ದರೆ ಎಷ್ಟು ಚೆನ್ನಾಗಿದ್ದೀತು ! ಇದಿರಲಿ. ಈತನ ಕಳೆಗಳನ್ನು ದೇವತೆಗಳು ಆಹಾರ ಮಾಡ್ತಾರಂತಲ್ಲ. ನಿಜವೇ ?'

ಸುಬ್ಬನಿಗೆ ಅವನ ನಕ್ಷೆಯ ಪುಸ್ತಕ ತರಲು ಹೇಳಿದೆ. ತಾತ ಇನ್ನು ಬಿಡನೆಂದು ಪಡಸಾಲೆಗೆ ಬಂದೆ. ಆತ ದೀಪದ ಹತ್ತಿರ ಕೂತ. ಚಂದ್ರನ ಕಳೆಗಳನ್ನು ತೋರಿಸುವ ಪಟವನ್ನು ತೆಗೆದೆ.




ಚಂದ್ರನ ಕಳೆಗಳು

'ಈ ನಡುವಿನದು ಭೂಗೋಳ. ಈ ಚಿಕ್ಕ ಚುಕ್ಕೆ ಚಂದ್ರ. ಬಲಗಡೆಯಿರುವ ಅಂಬಿನ ಗೆರೆಗಳು ಸೂರ್ಯಕಿರಣಗಳು. ಒಂದು ಸಂಗತಿ ನೆನಪಿರಬೇಕು. ಚಂದ್ರನ ಬೆಳಕು ಎರವು ಸೊತ್ತು. ಆತ ತನ್ನ ಸುತ್ತ ತಾನು ತಿರುಗುವುದು ಬಲು ನಿಧಾನ. ಸೂರ್ಯನ ಬೆಳಕು ಬೀಳುತ್ತದೆ ಅಂತಲೇ ನಮಗೆ ಕಾಣಿಸುತ್ತಾನೆ ; ದೀಪದ ಬೆಳಕು ಬಿದ್ದ ಕನ್ನಡಿ ಕತ್ತಲಲ್ಲಿ ನಮಗೆ ಕಾಣಿಸುವ ಹಾಗೆ. ಸೂರ್ಯನ ಬೆಳಕು ಯಾವ ಖಗೋಳದ ಮೇಲೇ ಬೀಳಲಿ ಆದರಲ್ಲಿ ಅರ್ಧಭಾಗ ಮಾತ್ರವೇ ಬೆಳಕಿನಲ್ಲಿ ಇರುತ್ತದೆ. ನಮ್ಮ ಭೂಗೋಳದಲ್ಲಿ ಹಗಲು ರಾತ್ರಿ ಹಾಗೇ ಅಲ್ಲವೆ ಆಗುತ್ತಾ ಇರುವುದು! ಚಂದ್ರನಲ್ಲೂ ಹೀಗೇ-ಅರ್ಧಭಾಗ ಮಾತ್ರ ಬೆಳಕಿನಲ್ಲಿ ಇರುತ್ತದೆ. ನಮ್ಮ ದಿನಗಳ ಲೆಕ್ಕದ ಪ್ರಕಾರ

ಚಂದ್ರನಿಗೆ ಹದಿನೈದು ದಿನ ಹಗಲು. ಅಂದರೆ, ಸೂರ್ಯನ ಬೆಳಕಿನಿಂದ ಹೊಳೆಯುವ ಚಂದ್ರನ ಅರ್ಧಭಾಗ ಹದಿನೈದು ದಿನ ನಮಗೆ ಕಾಣಿಸುತ್ತದೆ. ಅದೇ ರೀತಿ, ಇನ್ನೊಂದು ಹದಿನೈದು ದಿನ ಇನ್ನರ್ಧ ಚಂದ್ರ ಸೂರ್ಯಕಾಂತಿಯಿಂದ ನಮಗೆ ಕಾಣಿಸುತ್ತಾನೆ. ಮತ್ತೆ ಮುಂದಿನ ಹದಿನೈದು ದಿನ ಮತ್ತೆ ಅರ್ಧ. ಚಂದ್ರನ ಭ್ರಮಣದಿಂದಲೆ ಈ ವ್ಯತ್ಯಾಸಗಳೆಲ್ಲ! ಈ ಪಟವನ್ನು ಚೆನ್ನಾಗಿ ನೋಡು. ಸುಲಭವಾಗಿ ತಿಳಿಯುತ್ತದೆ.'

ಪೆಟ್ಟಿಗೆಯಲ್ಲಿದ್ದ ಹೊಸ ಚೆಂಡನ್ನೂ ನಿನ್ನೆ ಹಾಳು ಮಾಡಿದ ಆ ಚೆಂಡನ್ನೂ, ಟಾರ್ಚನ್ನೂ ತರಲು ಹೇಳಿದೆ. ಒಂದು ಚೆಂಡು ಭೂಮಿ, ಇನ್ನೊಂದು ಚಂದ್ರ. ಟಾರ್ಚು ಸೂರ್ಯ. ಹೀಗೆ ಒಂದಕ್ಕೊಂದು ಸರಿಯಾದ ದೂರದಲ್ಲಿ ನಿಲ್ಲಿಸಿ ಚಂದ್ರನ ಚೆಂಡನ್ನು ಪಟದಲ್ಲಿರುವ ದಶೆಗಳನ್ನೂ ತೋರಿಸುತ್ತ, ತಿರುಗಿಸುತ್ತ ಬಂದೆ. ಸ್ವಲ್ಪ ಊಹೆಯಿಂದ ಓದುಗರು ಇದನ್ನೂ ಊಹಿಸಬಹುದು. ಒಂದು ವಿಷಯ: ಚಂದ್ರನ ಚೆಂಡನ್ನು ಭೂಮಿಯ ಚೆಂಡಿನ ಮಟ್ಟಕ್ಕೆ ಸ್ವಲ್ಪ ಎತ್ತರವಾಗಿ ಹಿಡಿಯಬೇಕು. ಏಕೆ ಗೊತ್ತೆ? ಗೊತ್ತಾಗುತ್ತದೆ ಇಷ್ಟರಲ್ಲೆ.

'ತಾತಾ, ಪಟದಲ್ಲಿ ೮ ದಶೆ ಇವೆ.

೧. ಅಮಾವಾಸ್ಯೆ. ಚಂದ್ರ ಕಾಣಿಸುವುದೇ ಇಲ್ಲ. ಆದರೆ ಅತ್ತಕಡೆಯ ಭಾಗ ಮಾತ್ರ ಪೂರಾಬೆಳಕು, ಇದೇ ಕೃಷ್ಣಪಕ್ಷದ ಪ್ರಾರಂಭ. ಚಂದ್ರ ತನ್ನ ಸುತ್ತ ತಾನು ತಿರುಗುತ್ತಾ ನಮ್ಮ ಸುತ್ತಲೂ ತಿರುಗನೆ? ಇಕೊ, ಹೀಗೆ............ಇದರಿಂದ ಸೂರ್ಯನ ಬೆಳಕು ಬೀಳುವ ಅರ್ಧಭಾಗ ನಮಗೆ ಒಂದೇ ಸಲ ಕಾಣುತ್ತಿಲ್ಲ; ಕ್ರಮ ಕ್ರಮವಾಗಿ ಕಾಣುತ್ತಿದೆ. ಇದೋ, ೨ರ ಬಳಿ ಬಿದಿಗೆ ಚಂದ್ರ. ೩ ರ ಬಳಿ ಷಷ್ಠಿಯ ಅರ್ಧ ಚಂದ್ರ. ೪ರ ಬಳಿ ದಶಮಿ. ಈಗ ಚಂದ್ರನಲ್ಲಿ ಮುಕ್ಕಾಲು ಭಾಗ ಕಾಣುತ್ತದೆ. ೫ರ ಬಳಿ ಪೂರ್ಣಚಂದ್ರ. ಬೆಳಕು ಬಿದ್ದ ಚಂದ್ರನ ಅರ್ಧಭಾಗ ಪೂರ್ತಿಯಾಗಿ ಕಾಣುತ್ತದೆ. ಇಲ್ಲಿ ಕೃಷ್ಣಪಕ್ಷ ಮುಕ್ತಾಯ; ಶುಕ್ಲಪಕ್ಷ ಪ್ರಾರಂಭ.

ಇಲ್ಲಿಂದ ಚಂದ್ರ ಕ್ರಮೇಣ ಕಡಮೆ ಕಡಮೆಯಾಗಿ ಕಾಣಿಸುತ್ತಾನೆ. ೬ರ ಬಳಿ ೪ರ ಬಳಿ ಇದ್ದಹಾಗೇ. ೭ರ ಬಳಿ ಮತ್ತೆ ಅರ್ಧಚಂದ್ರ. ೮ರ ಬಳಿ ಮತ್ತೆ ೨ರಬಳಿ ಇದ್ದಂತೆ ಕುಡುಗೋಲುಚಂದ್ರ. ಆಮೇಲೆ ಅಮಾವಾಸ್ಯೆ....

ಚಂದ್ರನ ಏರಿಳಿತ, ವೃದ್ಧಿ ಕ್ಷಯಗಳಿಗೆ ಕಾರಣ ಸೂರ್ಯನ ಬೆಳಕಿನಿಂದ ಹೊಳೆ ಯುವ ಆತನ ಅರ್ಧಭಾಗ ಹೆಚ್ಚಾಗುತ್ತ ತಗ್ಗುತ್ತಾ ಬರುತ್ತಿರುವುದೇ.'

' ಹಾಗಾದರೆ ದೇವತೆಗಳ ಆಹಾರ ಎಲ್ಲಾ ಸುಳ್ಳೆ ?'

' ತಾತ, ಇದುವರೆಗೇ ಇಂಥ ಪ್ರಶ್ನೆಗಳಿಗೆ ಉತ್ತರ ಹೇಳಿದೇನೆ. ನಮ್ಮ ಪೂರ್ವಿಕರು ಈ ಖಗೋಳವನ್ನು ಬಹಳ ಎಚ್ಚರಿಕೆಯಿಂದ ಪರಿಶೀಲಿಸಿದಾರೆ. ತಮ್ಮ ಕಣ್ಣಿಗೆ ಕಂಡಷ್ಟು ದೂರವೂ ಪರೀಕ್ಷಿಸಿದರು. ಗಣಿತ ಶಾಸ್ತ್ರದಲ್ಲಿ ನಮ್ಮವರು ಅಪಾರ ಮೇಧಾವಿಗಳು ! ನಮ್ಮ ಜ್ಯೋತಿಷ ಸಿದ್ಧಾಂತ ಬಲು ದೊಡ್ಡದು. ಚಂದ್ರನ ಈ ವೃದ್ಧಿ ಕ್ಷಯಗಳನ್ನು ಗಮನಿಸಿ, ಆ ಕಲಾಪದಲ್ಲಿ ನಕ್ಷತ್ರ ಗಮನದಲ್ಲಿ ಏನಾದರೂ ವ್ಯತ್ಯಾಸಗಳಾಗುವುದನ್ನು ಕಂಡು ಹೀಗೊಂದು ಕತೆ ಕಟ್ಟಿದರೋ ಏನೋ. ಈ ವಿಷಯದಲ್ಲಿ ಇನ್ನೂ ಬಹಳ ಪರಿಶೋಧನೆ ನಡೆಯಬೇಕು.'

ತಾತನ ತರ್ಕ ಮತ್ತೆ ಧುಮುಕಿ ಬಂತು.

'ಸ್ವಾಮಿ, ನೀವು ಚಂದ್ರ ಭೂದೇವಿಯ ಮಗ ಎಂದಿರಿ. ನಮ್ಮವರು ಸಮುದ್ರದ ಮಗ ಎಂದರು. ಹುಣ್ಣಿಮೆ ದಿವಸ ಕಡಲು ಹಾಗೆ ಉಕ್ಕುತ್ತದೆ ಯಲ್ಲ. ಏನೂ ಸಂಬಂಧವಿಲ್ಲ ಅಂತೀರಾ ? ಚಂದ್ರ ಕಡಲನ್ನು ಸೆಳೀತಾನೆ ಅಂದಿದ್ದಿರಿ, ನೀವೇ !'

ಗೋಳಪಟವನ್ನು ತೆಗೆದೆ.

'ಹಳೇ ಹೊಸ ಪ್ರಪಂಚಗಳ ನಡುವೆ ಈ ಪೆಸಫಿಕ್ ಸಮುದ್ರ ಇಲ್ಲವೆ, ಇಲ್ಲಿ ಸಮುದ್ರವಾಗುವ ಮೊದಲು ನೆಲ ಇತ್ತು ! ಈ ಪ್ರಾಂತದಿಂದಲೇ ಚಂದ್ರಗೋಳ ಎಗರಿ ಹೋಗಿರಬೇಕು ಎಂದು ಶಾಸ್ತ್ರಜ್ಞರು ನಿರ್ಧರಿಸಿದಾರೆ. ಅದರಿಂದ ಆದ ತಗ್ಗಿನಲ್ಲೇ, ಪೆಸಫಿಕ್ ಸಮುದ್ರವಾಯಿತೆಂದು ಹೇಳು ತ್ತಾರೆ........'

'ಆದ್ದರಿಂದ ಚಂದ್ರನಿಗೆ ಬಹಳ ಸಂಬಂಧವಾಯಿತು. '

' ಹೌದು. ಹೀಗೆ ನಮ್ಮ ಕಥೆ ಕೆಲವನ್ನು ಶಾಸ್ತ್ರಕ್ಕೆ ಹೊಂದಿಸಿಕೊಳ್ಳ ಬಹುದು. ಆದರೆ ಚಂದ್ರ ಭೂಮಿಯಿಂದ ಹುಟ್ಟಿದ ಎಂಬುದು ಒಂದು ಸಿದ್ಧಾಂತ. ಇನ್ನೊಂದು ಇದೆ. ಈತ ಒಂದು ಚಿಕ್ಕಗ್ರಹ ; ಅಕಸ್ಮಾತ್ತಾಗಿ ಭೂದೇವಿಯ ಸೆಳೆತದ ಸುಳಿಯೊಳಗೆ ಬಂದು ಬಿದ್ದ ಎಂತ . '

' ಭೇಷ್, ಮತ್ತೆ ಇದೊಂದು ಕಥೆ ಬೇರೇನೆ ? ನಮ್ಮ ಹಿರಿಯರನ್ನು

ಯಾಕೆ ಅನ್ನಬೇಕು ? ನಿಮ್ಮ ಶಾಸ್ತ್ರಿಗಳಿಗೂ ಬಹಳ ಹುಚ್ಚು ಇದೆ........ಅದಿರಲಿ, ಚಂದ್ರ ನಮಗೆ ಬಹಳ ಹತ್ತಿರ ಅನ್ನಲಿಲ್ಲವೆ ? '

'ಚಂದ್ರ ಕೂಡ ಭೂಗೋಳದ ಸುತ್ತಲೂ ಸೌತೆಕಾಯಿ ಆಕಾರದ ಪಥದಲ್ಲಿ ತಿರುಗುತ್ತಿದ್ದಾನೆ. ಆದ್ದರಿಂದ ಇಷ್ಟೇ ದೂರ ಎನ್ನಲು ಬಾರದು. ಬಹಳ ಹತ್ತಿರ ಬಂದಾಗ ೨ ಲಕ್ಷದ ೨೧ ಸಾವಿರದ ೪೬೩ ಮೈಲಿ. ಬಹಳ ದೂರ ಹೋದಾಗ ೨ ಲಕ್ಷದ ೫೨ ಸಾವಿರದ ೭೧೦ ಮೈಲಿ. '

'ಹೇಗೆ ಬಂಗಾರದ ತಟ್ಟೆಯ ಹಾಗೆ ಇದಾನೆ. ನಮ್ಮ ಭೂದೇವಿಗಿಂತ ಚಿಕ್ಕವನಲ್ಲವೆ ?'

' ಹೌದು. ೮೧ ಪಾಲು ಚಿಕ್ಕವನು. ನಮಗೆ ಬಹಳ ಹತ್ತಿರವಾದ್ದರಿಂದ ಈತನಿಗಿಂತ ಎಷ್ಟೋ ಬಹಳ ದೂರದಲ್ಲಿರುವ ಸೂರ್ಯ, ಈತ, ಇಬ್ಬರೂ ಸುಮಾರು ಒಂದೇ ಗಾತ್ರವಾಗಿ ಕಾಣುತ್ತಾರೆ. ಹತ್ತಿರ ಇರುವುದರಿಂದಲೇ ಕಡಲಲ್ಲಿ ಉಕ್ಕು ತುಳುಕೂ, ಉಬ್ಬರ ಇಳಿತಗಳೂ ಆಗುತ್ತಿವೆ. ನಮ್ಮ ಕಣ್ಣಿಗೆ ಈತನ ಗಾತ್ರವೂ ಸೂರ್ಯನ ಗಾತ್ರವೂ ಒಂದೇ ಆಗಿ ಕಾಣುತ್ತಿರುವುದರಿಂದಲೇ ಸೂರ್ಯ ಬಿಂಬವನ್ನು ಈತ ಮುಚ್ಚಿಹಾಕುತ್ತಾನೆ. ಸೂರ್ಯಗ್ರಹಣವಾದಾಗ ನಮಗೆ ಹಾಗೆ ಕಾಣಿಸುತ್ತದೆ.'

' ಸೂರ್ಯ ಚಂದ್ರನಿಗಿಂತ ಶಕ್ತಿವಂತ ಅಲ್ಲವೆ, ಮೇಷ್ಟ್ರೆ ? ಆತ ಸೆಳೆಯುವದಿಲ್ಲವೆ ? '

' ಸೆಳೆಯುದೆ ಏನು ? ಆದರೆ ಬಲು ದೂರವಾದ್ದರಿಂದ ಚಂದ್ರನಷ್ಟು ಪ್ರಭಾವ ತೋರಿಸಲಾರ. ಚಂದ್ರನಿಗಿಂತ ೪೦೦ ಪಾಲು ದೂರದಲ್ಲಿದಾನೆ ನಮಗೆ.

ಚಂದ್ರ ನಮಗೆ ಹತ್ತಿರವಾದ್ದರಿಂದ ಭೂಗೋಳವನ್ನೆ ಸೆಳೆಯುತ್ತಿದಾನೆ. ನೆಲ ಭಾರವಾದ ಪದಾರ್ಥ, ಅದರ ಮೇಲೆ ಆತನ ಪ್ರಭಾವ ಅಷ್ಟಾಗಿ ಕಾಣಿಸುವುದಿಲ್ಲ. ಕಡಲನೀರು ದ್ರವ ಪದಾರ್ಥ. ಆದ್ದರಿಂದ ಉಕ್ಕುತ್ತದೆ. ಚಂದ್ರ ಭೂಮಿಯ ಸುತ್ತಲೂ ತಿರುಗುತ್ತಿಲ್ಲವೆ ? ಅದರಿಂದ ಒಂದೊಂದು ಸಲ ಭೂಗೋಳಕ್ಕೆ ಒಂದೊಂದು ಪಕ್ಕದಲ್ಲಿ ಇರಬೇಕು. ಭೂಗೋಳದ ಯಾವ ಪಕ್ಕಕ್ಕೆ ಚಂದ್ರ ಇದಿರೋ ಆ ಪಕ್ಕದ ಕಡಲ ನೀರು ಉಕ್ಕಬೇಕು. ಆದರೆ ವಿಚಿತ್ರವೇನುಗೊತ್ತೆ ? ಭೂಗೋಳದಲ್ಲಿ ಇತ್ತ ಕಡೆಗೆ ನೇರಾಗಿ ಅತ್ತಕಡೆ ಇರುವ ಕಡಲಿನ ನೀರೂ ಉಕ್ಕುತ್ತದೆ. ಅಂತೂ ದಿನಕ್ಕೆ

ಎರಡು ಸಲ ಕಡಲು ಉಕ್ಕುತ್ತಿದೆ. ೧೨ ೧|೨ ಗಂಟೆಗೆ ಒಂದು ಉಕ್ಕು. ಭೂಮಿ ತನ್ನ ಸುತ್ತಲೂ ತಿರುಗುತ್ತಿದೆ. ಚಂದ್ರನೂ ಆಕೆಯ ಸುತ್ತ ಪ್ರದಕ್ಷಿಣೆ ಮಾಡುತ್ತಿದಾನೆ. ಅಂದರೆ, ಭೂಗೋಳವೆಲ್ಲಾ ಒಂದೇ ಸಲ ಚಂದ್ರನಿಗೆ ಇದಿರಾಗಿರಲಾರದು. ಈಗ ಈ ಗಳಿಗೆ ಇಲ್ಲಿ ಕಡಲನ್ನು ಸೆಳೆಯುತ್ತಾನೆ. ಭೂಮಿಯ ಭ್ರಮಣದಿಂದಲೂ ತನ್ನ ಪ್ರದಕ್ಷಿಣೆಯಿಂದಲೂ ಮತ್ತೊಂದು ಗಳಿಗೆಯಲ್ಲಿ ಮತ್ತೊಂದು ಕಡೆ ಕಡಲನ್ನು ಸೆಳೆಯುತ್ತಾನೆ. ಇದರಿಂದಲೇ ಸಮುದ್ರದ ಅಲೆಗಳು ! ಅಲೆಗಳಿಲ್ಲದಿದ್ದರೆ ಕಡಲಿನಮೇಲೆ ಹಡಗು ಓಡಾಡುವುದು ಅಸಂಭವವಾಗುತ್ತಿತ್ತು. ಇದು ದಿನವೂ ನಡೆವ ಕಥೆ.

ಇನ್ನು ಹದಿನೈದು ದಿನಕ್ಕೊಂದು ಸಲ ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಇನ್ನೊಂದು ವಿಚಿತ್ರ ನಡೆಯುತ್ತದೆ. ಆ ದಿವಸಗಳಲ್ಲಿ ಸೂರ್ಯ ಭೂಮಿ ಚಂದ್ರ ಮೂವರೂ ಹೆಚ್ಚು ಕಡಮೆ ಒಂದೇ ಸಾಲಿಗೆ ಬರುತ್ತಾರೆ. ಆಗ ಸೂರ್ಯ ಚಂದ್ರ ಇಬ್ಬರೂ ಸೇರಿ ಕಡಲ ನೀರನ್ನು ಸೆಳೆಯುತ್ತಾರೆ. ಆ ಸಮಯದಲ್ಲಿ ಸೂರ್ಯ ಚಂದ್ರರಿಗೆ ಇದಿರಾಗಿರುವ ನೀರು ಉಕ್ಕುತ್ತದೆ; ಚೆನ್ನಾಗಿ ಉಬ್ಬಿ ಎತ್ತರವಾಗಿ ಹಾರಿ ತುಳುಕುತ್ತದೆ. ಇದೇ ಕಡಲಿನ **ಉಬ್ಬರ.** ಸಾಮಾನ್ಯವಾಗಿ ಹತ್ತಿರವಿರುವ ಚಂದ್ರನ ಸೆಳೆತಕ್ಕೆ ಅತನ ಇದಿರಿಗಿರುವ ಪ್ರದೇಶಗಳಲ್ಲಿ ಮಾತ್ರ ನೀರು ಉಕ್ಕುತ್ತದೆ. ಉಳಿದ ಕಡೆ ಉಕ್ಕುವುದಿಲ್ಲ. ಇದು **ಉಕ್ಕು.**




ಚಿತ್ರದಲ್ಲಿ ಮಧ್ಯೆ ಸೂರ್ಯನನ್ನು ನೋಡು. ಇತ್ತ ಅತ್ತ ಚಂದ್ರ. ಆಕೆಯ ಸುತ್ತಲೂ ಚಂದ್ರ. ಭೂಮಿಯ ಸುತ್ತಲೂ ಕಡಲಿನ ಉಕ್ಕು ಹೇಗಿದೆಯೋ ಕಾಣುತ್ತದೆ.

೧ ರಲ್ಲಿ **ಅ** ಎಂದರೆ ಅಮಾವಾಸ್ಯೆ. **ಹು** ಎಂದರೆ ಹುಣ್ಣಿಮೆ. ಸೂರ್ಯಚಂದ್ರರಿಬ್ಬರ ಸೆಳೆತದಿಂದ **ಉಬ್ಬರ.** ಚಿತ್ರದಲ್ಲಿ ೨ರ ಬಳಿ ಚಂದ್ರನ ಪ್ರಭಾವ ಹೆಚ್ಚು. ಅಲ್ಲಿ **ಉಕ್ಕು.** ಈ ವೈಖರಿ ಪ್ರತಿಪಕ್ಷದಲ್ಲಿ ಮೊದಲ ಐದು ದಿನವೂ ಕಾಣುತ್ತದೆ. ಇದು ಉಕ್ಕು–ಉಬ್ಬರಗಳ ಕಥೆ.’

'ಈತನೂ ಏನೋ ಉಪಕಾರ ಮಾಡುತ್ತಲೇ ಇರುತ್ತಾನೆ. ಹಾಗಾದರೆ, ಸೂರ್ಯ ಗ್ರಹಣದಲ್ಲಿ ನಾವು ನೋಡುವ ಭೂತ ಚಂದ್ರ; ರಾಹುವಲ್ಲ ಅನ್ನಿ.'

'ಹೌದು ತಾತ. ಚಂದ್ರಬಿಂಬ ಸೂರ್ಯನನ್ನು ಮುಚ್ಚಿ ಹಾಕಿದರೆ ಸೂರ್ಯಗ್ರಹಣ.'

'ಮೇಷ್ಟ್ರೆ, ಪೂರ್ತಿ ಗ್ರಹಣದಲ್ಲಿ ಚಂದ್ರನ ನೆರಳು ಸೂರ್ಯನನ್ನು ಮುಚ್ಚಿ ಹಾಕುತ್ತದೆಯಲ್ಲ. ಕೆಲವರಿಗೆ ಮಾತ್ರ ಪೂರ್ತಿ ಗ್ರಹಣ ಎಂಬುದೇನು ಮತ್ತೆ?'

'ಸೂರ್ಯ ಚಂದ್ರನಿಗಿಂತ ಬಹಳ ದೊಡ್ಡವನು. ದೂರದಿಂದ ನಮ್ಮ ಕಣ್ಣಿಗೆ ಇಬ್ಬರೂ ಒಂದೇ ರೀತಿಯಾಗಿ ಕಾಣುತ್ತಿದಾರೆ. ಚಂದ್ರ ಸೂರ್ಯ ಬಿಂಬವನ್ನು ಪೂರ್ತಿಯಾಗಿ ಮುಚ್ಚಲೇ ಆರ. ಅಷ್ಟು ಸಾಮರ್ಥ್ಯವಿಲ್ಲ. ಆದ್ದರಿಂದ ಸೂರ್ಯ ಬಿಂಬದ ಸುತ್ತಲೂ ಸ್ವಲ್ಪ ಭಾಗದಿಂದ ಬೆಳಕು ನಮ್ಮ ಭೂಗೋಳಕ್ಕೆ ಬರುತ್ತಲೇ ಇದೆ. ಆದರೆ ಚಂದ್ರಬಿಂಬದಿಂದ ಬರುವ ನೆರಳು—ಛಾಯೆ; ಇಕೋ ಈ ಪಠದಲ್ಲಿ ಕಾಣುವ ಛಾಯೆ ಸುಮಾರು ೫೦ ಮೈಲಿ ಅಗಲ. ಈ ಪ್ರದೇಶದಲ್ಲಿ ಇರುವವರಿಗೆ ಮಾತ್ರ ಪೂರ್ಣಗ್ರಹಣ ಅದೂ ಕೆಲವು ನಿಮಿಷ. ಅದು ಯಾವಾಗ ಎಲ್ಲಿ ಎಂಬುದನ್ನು ಶಾಸ್ತ್ರಜ್ಞರು ನಿರ್ಧರಿಸಿ, ಆ ಸಮಯಕ್ಕೆ ಸರಿಯಾಗಿ ತಮ್ಮ ಯಂತ್ರಗಳೊಡನೆ ಅಲ್ಲಿ ಸೇರುತ್ತಾರೆ. ಆ ಕೆಲವು ನಿಮಿಷ ಅವರಿಗೆ ಬಹಳ ಮುಖ್ಯ.'

'ಏನೋ ಅಷ್ಟು ವಿಶೇಷ?' ಆಕಳಿಕೆ ತಡೆದುಕೊಳ್ಳುತ್ತ ಚಿಟಿಕೆ ಹಾಕಿದ.

'ಸೂರ್ಯನ ಸುತ್ತೂ ಹೇಗೆ ಇದೆಯೋ ತಿಳಿಯಲು ಅದೊಂದೇ ಅವಕಾಶ. ಫೋಟೋ ತೆಗೆಯಲು ಸಾಧ್ಯವಾಗುತ್ತದೆ. ಉಳಿದಾಗ ಸಾಧ್ಯವಲ್ಲ....ಈ ಛಾಯೆಯ ಹೊರಗಿರುವವರಿಗೆ ಪೂರ್ತಿ ಗ್ರಹಣವಿಲ್ಲ.'

'ದೇವರು, ಎಷ್ಟು ತಮಾಷೆ ನೋಡಿ. ಈತ ಸೂರ್ಯನಿಗೆ ಅಡ್ಡವಾಗುತ್ತಾನೆ. ಈತನನ್ನು ಭೂದೇವಿ ಮುಚ್ಚಿಬಿಡುತ್ತಾಳೆ.'

'ಹೌದು, ಚಂದ್ರಗ್ರಹಣದಲ್ಲಿ. ಇಕೊ, ಈ ಚೆಂಡು ಚಂದ್ರ, ಈ ಚೆಂಡು ಭೂಮಿ. ಈ ದೀಪ ಸೂರ್ಯ. ಭೂಮಿ ಸೂರ್ಯನ ಸುತ್ತಲೂ

ತಿರುಗುತ್ತಿದೆ. ಚಂದ್ರ ಭೂಮಿಯ ಸುತ್ತಲೂ ತಿರುಗುತ್ತಿದಾನೆ....'

ಮೊದಲೇ ಹೇಳಿದ ಹಾಗೆ ಚಂದ್ರನ ಚೆಂಡನ್ನು ಭೂಮಿಯ ಚೆಂಡಿಗಿಂತ ಸ್ವಲ್ಪ ಎತ್ತರದಲ್ಲಿ ಹಿಡಿಯಬೇಕು.

'........ಈ ಪ್ರದಕ್ಷಿಣೆಯಲ್ಲಿ ಚಂದ್ರ ಸೂರ್ಯನಿಗೂ ಭೂಮಿಗೂ ನಡುವೆ ಬಂದಾಗ, ಚಂದ್ರನ ನೆರಳು ಸೂರ್ಯನಮೇಲೆ ಬಿದ್ದು ಸೂರ್ಯಗ್ರಹಣವಾಗುತ್ತದೆ. ಅದೇ ರೀತಿ ಭೂಮಿ ಚಂದ್ರನಿಗೂ ಸೂರ್ಯನಿಗೂ ನಡುವೆ ಬಂದಾಗ ಚಂದ್ರಗ್ರಹಣ. ಇಕೊ ಈ ಚಿತ್ರ ನೋಡು. ಈ ಅಂಬಿನ ಗುರುತು ಚಂದ್ರ ಯಾವ ಮುಖವಾಗಿ ಹೋಗುತ್ತಿರುವನೋ ತಿಳಿಸುತ್ತದೆ.

'ಮೇಷ್ಟ್ರೆ, ಪ್ರತಿ ಹುಣ್ಣಿಮೆಯಲ್ಲೂ ಭೂಮಿ, ಚಂದ್ರ, ಒಂದೇ ಮಟ್ಟಕ್ಕೆ ಬರುತ್ತಾರಲ್ಲ? ಆಗ ಭೂಮಿಯ ನೆರಳು ಚಂದ್ರನ ಮೇಲೆ ಬೀಳಬೇಡವೆ?'

'ಗಡಸು ಪ್ರಶ್ನೆಯನ್ನೆ ಕೇಳಿದೆ. ಇದರಲ್ಲೂ ಒಂದು ವಿಚಿತ್ರವಿದೆ. ನಾನು ಈ ಚಂದ್ರನ ಚೆಂಡನ್ನು ಹೇಗೆ ಹಿಡಿದಿದೇನೋ ನೋಡು. ಚಂದ್ರನ ಪಥ, ಭೂಮಿಯ ಪಥ ಒಂದೇ ಮಟ್ಟದಲ್ಲಿಲ್ಲ. ಸ್ವಲ್ಪ ಬಾಗಿ ತಿರುಗುತ್ತಿದಾನೆ. ಆದ್ದರಿಂದ ಭೂಗೋಳ ಪಥಕ್ಕೆ ಸ್ವಲ್ಪ ಮೇಲೋ ಕೆಳಗೋ ಬರುತ್ತಾನೆ. ಒಂದೊಂದು ಸಲ ಆ ಉಯ್ಯಾಲೆಯಲ್ಲಿ ಭೂಮಿಯ ಮಟ್ಟಕ್ಕೆ ಸರಿಯಾಗಿ ಬರುತ್ತಾನೆ. ಹಾಗೆ ಸಮವಾಗಿಬಂದ ಹುಣ್ಣಿಮೆಯ ದಿನ ಚಂದ್ರಗ್ರಹಣ. ಅಮವಾಸ್ಯೆಯ ದಿನ ಸೂರ್ಯಗ್ರಹಣ.'

ಪೂರ್ಣಗ್ರಹಣಗಳು

ಸೂರ್ಯ
ಚಂದ್ರ
ಭೂಮಿ
ಛಾಯೆ

ಸೂರ್ಯ
ಭೂ
ಚಂ

'ಅದೇನೆ ಸಂಗತಿ! ಅದಕ್ಕಾಗಿ ಆ ಚೆಂಡು ಹಾಗೆ ಹಿಡಿದಿದೀರಾ? ಕೇಳಬೇಕು ಅಂತ ಸುಮ್ಮನಿದ್ದೆ....ನಿಮ್ಮ ಧೋರಣೆ ನೋಡಿದರೆ ಇವ್ರೊತ್ತೇನೂ ಇನ್ನು ಮಾತಾಡುವ ಹಾಗಿಲ್ಲ. ಸುಖವಾಗಿದಾರೆ ಅಂತ ಕಾಗದ ಬರುತ್ತಿವೆ ತಾನೆ? .... ಭೂದೇವಿಯನ್ನು ಪೀಡಿಸುವವರು! ನಾವೇ ಎಂದು

ಕೊಂಡಿದ್ದೆ. ನಿಮ್ಮ ಶಾಸ್ತ್ರಗಳ ಪ್ರಕಾರ ನಮ್ಮ ಈ ಹಿರಿಯಣ್ಣ, ಅವನದೂ ಅದೇ ಘೋರಣೆಯೇ!'

'ಆತನೇ ಇಲ್ಲದಿದ್ದರೆ ಕಡಲಿನ ಅಲೆಗಳಿಲ್ಲ; ಹಡಗು ಓಡಾಡವು. ತಿಂಗಳಿಗೆ ೧೫ ದಿನವಾದರೂ ಬೆಳಕಿಗೆ ಆತನೇ ತಾನೆ ಕಾರಣ?'

'ಭಾಳ ಓದಿದ್ದೀ ಬಿಡು ನೀನು, ಸುಬ್ಬಯ್ಯ, ಹಡಗಿಲ್ಲದಿದ್ರೆ ವಿಮಾನ ವಾಯ್ತು. ಎಲೆಟ್ರಿಕ್ಕು ಇಲ್ಲವೆ? ಇನ್ನು ಈತ ಯಾಕೆ? ....ಆದರೂ ಈ ಬೆಳಕಿನ ತಂಪು ನಿಮ್ಮ ಎಲೆಕ್ಟ್ರಿಕ್ಕಿನಲ್ಲಿ ಎಲ್ಲಿದೆ?....ಬರ್ತೀನೆ'....



## ೧೦

## ನಗರ ವಿನಾಶ—ಪ್ರಳಯ

‘ ಈ ಬ್ರಹ್ಮಾಂಡವೆಲ್ಲ ನಾಶವಾದ ಮೇಲೆ—ಅದರ ಮೇಲೆ ಇರ್‍ತಾನಂತೆ ದೇವರು. ಯಾವ ವೈಕುಂಠದಲ್ಲಿದಾರೋ ನಮ್ಮ ಶಾಸ್ತ್ರಿಗಳು. ಎಷ್ಟು ಚೆನ್ನಾಗಿ ಹೇಳಿದ್ದರು ಪುರಾಣ! ಪ್ರಳಯವೇ ಬಂತೋ ಅಂದುಕೊಳ್ಳುತ್ತಿದ್ದೆವು. ಅವರಿಗೆ ಮೈಮೇಲೆ ಎಚ್ಚರವೇ ಇರುತ್ತಿರಲಿಲ್ಲ, ಅದನ್ನು ಹೇಳಬೇಕಾದರೆ—ಸ್ವಾಮಿ, ನಿಮ್ಮ ಶಾಸ್ತ್ರಿಗಳು ಏನಂತಾರೆ? ಇದೆಲ್ಲಾ ಏನಾಗುತ್ತದೆ? ಈ ಪ್ರಳಯದ ಸಂಗತಿ ನಿಜವೇ?’

ಬಿದಿಗೆ ಚಂದ್ರ ನಮ್ಮನ್ನು ನೋಡಿ ನಗುತ್ತಿದಾನೆಯೋ ಅನಿಸಿತು ನನಗೆ. ‘ಹುಚ್ಚ! ನನ್ನ ಬೆಳುದಿಂಗಳನ್ನು ಕರ್ಪೂರ ಕಾಂತಿಯೆಂದು ಮಲ್ಲಿಗೆ ಹೂ ಮಳೆಯೆಂದು ಅಮೃತಧಾರೆಯೆಂದು ಎಷ್ಟೋ ಹಾರಾಡುತ್ತೀಯೆ! ೧೫ ದಿನ ನಾನು ಕಾಣಿಸದೆ ಹೋದರೆ ಎಷ್ಟು ಜನರೋ ನಿಮ್ಮ ಲೋಕದಲ್ಲಿ ಕಣ್ಣೀರುಬಿಡುವವರು? ಆದರೆ ನಾನು ಯಾವಾಗಲೂ ಕಾಣಿಸಿದರೆ ನನ್ನ ಬೆಲೆಯೇನು ಬಂತು? ಬಂಗಾರ ಅಪರೂಪ ಎಂತಲೇ ಅದಕ್ಕೆ ಬೆಲೆ ........’

ನನ್ನ ಭಾವನೆ ರೆಕ್ಕೆ ಕೆದರಿ ಹೀಗೆ ಹಾರಿದೆ. ನಿಜವಾಗಿ ಈತ ಯಾವಾಗಲೂ ಕಾಣಿಸಿದರೆ? ಶಾಸ್ತ್ರಜ್ಞನ ಮಾತಿನಂತೆ ಹಾಗಾಗಬೇಕಲ್ಲವೆ? ಹೇಗೂ ತಾತ ಪ್ರಶ್ನೆ ಕೇಳಿದಾನೆ. ಮೊದಲು ಈತನ ಸಂಗತಿಯನ್ನೇ ಪ್ರಾರಂಭಿಸೋಣ ಎಂದುಕೊಂಡೆ.

‘ತಾತಾ, ಈಗಣ ಶಾಸ್ತ್ರ ಕೂಡ ಪ್ರಳಯವನ್ನು ಒಪ್ಪಿಕೊಳ್ಳುತ್ತಿದೆ. ಆದರೆ ನಮ್ಮ ಪುರಾಣಗಳಿಗೂ ಇದಕ್ಕೂ ಸ್ವಲ್ಪ ಭೇದವಿದೆ. ಈ ಚಂದ್ರನ ಸಂಗತಿಯನ್ನೇ ನೋಡೋಣ. ಈತ ಭೂಗೋಳದ ಸುತ್ತಲೂ ತಿರುಗುತ್ತಿ

ದಾನೆ. ಈ ಭೂಮಿ ಒಂದು ಅಯಸ್ಕಾಂತಗೋಳ. ಈ ಗೋಳದ ಆಕರ್ಷಣ ಕ್ಷೇತ್ರದಲ್ಲಿ ಸಿಕ್ಕಿಬಿದ್ದ ಚಂದ್ರ ಹಲವು ಕೋಟಿ ವರುಷದ ತರುವಾಯ ಭೂಮಿಗೆ ಬಹಳ ಹತ್ತಿರ ಬರುತ್ತಾನೆ. ಆಗ ನಾಲ್ಕು ಚೂರಾಗಿ ಒಡೆದು ಹೋಗುತ್ತದೆ ಚಂದ್ರಗೋಳ. ಭೂಮಿಯ ಸುತ್ತ ದಿನವೂ ನಾಲ್ವರು ಚಂದ್ರರು ಕಾಣಿಸುತ್ತಾರೆ, ದಿನವೂ ಬೆಳುದಿಂಗಳೇ! ಕೆಲವರು ಚಂದ್ರ ಸಣ್ಣ ಸಣ್ಣ ಕಣಗಳಾಗಿ ತುಂಡು ತುಂಡಾಗುತ್ತಾನೆಂದೂ, ಶನಿಗ್ರಹದ ಸುತ್ತ ಇದ್ದ ಹಾಗೆ ಚಂದ್ರಖಂಡಗಳು ಭೂಮಿಯ ಸುತ್ತಲೂ ತಿರುಗುತ್ತವೆಯೆಂದೂ ಹೇಳುತ್ತಾರೆ. ಆಗ ಸೂರ್ಯನ ಪ್ರಭಾವ ಕಮ್ಮಿಯಾಗಿರುತ್ತದೆ.'

ಚಂದ್ರನಕಡೆ ನೋಡುತ್ತ ತಾತ ಅಂದ—'ಕೆಲವು ಕೋಟಿ ವರ್ಷಕ್ಕೆ! ಅಷ್ಟರೊಳಗೆ ನಾವು ಎಷ್ಟು ಜನ್ಮವೆತ್ತಬೇಕೋ ಏನೋ! ಸೂರ್ಯನ ಪ್ರಭಾವ ಕಮ್ಮಿ ಎಂದಿರಿ ಸ್ವಾಮಿ, ಹಾಗಂದರೆ?'

'ತಾತ, ನಮ್ಮ ಗ್ರಹಪಟ್ಟಣಕ್ಕೆ ಸೂರ್ಯನೇ ಜೀವಾಳ. ಅರಸನ ಪೋಷಣೆಯಲ್ಲಿ ಪ್ರಜೆ ಹೇಗೆ ವೃದ್ಧಿಹೊಂದುತ್ತಾರೋ, ಗೃಹಸ್ಥನ ಯಜಮಾನಿಕೆಯಲ್ಲಿ ಕುಟುಂಬ ಹೇಗೆ ಪೋಷಿತವಾಗುತ್ತದೆಯೋ, ಹಾಗೇ ಈತ ಕೊಡುವ ಕಾಂತಿಯಿಂದ ಈತ ಕೊಡುವ ಶಕ್ತಿಯಿಂದ, ಈತನ ಸೆಳೆತದ ಸಾಮರ್ಥ್ಯದಿಂದ ಗ್ರಹಗಳೆಲ್ಲ ತಮ್ಮ ಪಥದಲ್ಲಿ ತಿರುಗುತ್ತಿವೆ; ಖಗೋಳ ವೀಧಿಯಲ್ಲಿ ನಿಂತಿವೆ. ಈ ಭೂಗ್ರಹದ ಮೇಲೆ ಜೀವರಾಶಿಗಳು ಬದುಕುತ್ತಿದೆ....'

ಸೂರ್ಯದೇವನೆ ಲೋಕಪಾಲನೆ ಎಂದು ಸುಬ್ಬ ಚಿಕ್ಕದಾಗಿ ರಾಗ ಎಳೆದ.

'....ಇಂಥ ಈ ಸೂರ್ಯನ ಬಲವೂ ಅಕ್ಷಯವಲ್ಲ. ಕ್ರಮೇಣ ತಗ್ಗುವಂಥದು. ಪ್ರತಿಕ್ಷಣಕ್ಕೂ ಕೆಲವು ಸಾವಿರ ಮಣದಂತೆ ಸೂರ್ಯನ ಶಕ್ತಿ ಹೊರಗೆ ಹರಿಯುತ್ತಿದೆ. ಕುಲಿಮೆಯಲ್ಲಿ ಬೆಳಕು ಬಿಸಿ ಆ ಇದ್ದಿಲು ಉರಿಯುವುದನ್ನು ಹೊಂದಿಕೊಂಡು ಇದೆ. ಸೂರ್ಯನೊಳಗಿನ ಪದಾರ್ಥಗಳೂ ಅಣು ಅಣುಗಳಾಗಿ ಸಿಡಿದು, ಪರಮಾಣುದಶೆಯನ್ನು ಮೀರಿ ಹೀಗೆ ನಾಶವಾಗುತ್ತಿವೆ. ಈ ಪದಾರ್ಥ ವಿನಾಶದಿಂದಲೇ, ಈ ನಿತ್ಯ ಹೋಮದಿಂದಲೇ ಸೂರ್ಯಗೋಳದ ಈ ಬಿಸಿ, ಬೆಳಕು!

ಕ್ಷಣ ಕ್ಷಣವೂ ಸೂರ್ಯನ ಶಕ್ತಿ ತಗ್ಗುತ್ತಿದ್ದರೂ ಈತನ ಪ್ರಭಾವ ಪೂರ್ತಿಯಾಗಿ ತಗ್ಗಲು ೧೫-೨೦ ಕೋಟಿ ವರ್ಷ ಹಿಡಿದೀತೆಂದು ಶಾಸ್ತ್ರ ಬಲ್ಲವರ ಊಹೆ. ಆ ಹೊತ್ತಿಗೆ ಈತ ಕೆಂಪು ಚಿಕ್ಕೆಯಾಗುತ್ತಾನೆ. ಈಗಿನಕಿಂತ ಚಿಕ್ಕವನಾಗುತ್ತಾನೆ. ಕೆಂಪು ಚಿಕ್ಕೆಗಳ ಬಿಸಿ ಬಹಳ ಕಡಮೆ ಎಂದು ಹೇಳಿದೇನಲ್ಲವೆ. ಆಮೇಲೆ ಈತನ ಶಕ್ತಿ ಬೇಗ ಬೇಗ ಕುಗ್ಗುತ್ತದೆ. ಕಪ್ಪಗೆ ಆಗುತ್ತಾ ಇರುತ್ತಾನೆ.'

'ಮೇಷ್ಟ್ರೆ, ಗ್ರಹಗಳ ಕಾಂತಿ ಸೂರ್ಯನಿಂದ ತಾನೆ ಬರಬೇಕು. ಸೂರ್ಯನೇ ಹೀಗಿದ್ದರೆ ಗ್ರಹಗಳು ಹೇಗಿರುತ್ತವೆಯೊ?'

'ಸೂರ್ಯನಿಗೆ ಈ ಸ್ಥಿತಿ ಬರುವುದಕ್ಕೆ ಮೊದಲೇ ಗ್ರಹಗಳು ಆರಿಹೋಗಿರುತ್ತವೆ.'

'ಸ್ವಾಮಿ, ನಮ್ಮ ಭೂಗೋಳವೋ ಮತ್ತೆ?'

'ಬಂದೆ ತಾತಾ....ಹೀಗೆ ಸೂರ್ಯನ ಶಕ್ತಿ ಕುಗ್ಗುವಾಗ ಅದರ ಜೊತೆಗೇ ನಮ್ಮ ಭೂಗೋಳದ ಮೇಲಿನ ಬಿಸಿ ಕೂಡ ಕಡಿಮೆಯಾಗುತ್ತ ಬರುತ್ತದೆ. ಸೂರ್ಯ ಕೆಂಪು ಚಿಕ್ಕೆಯಾಗುವ ಹೊತ್ತಿಗೆ ಭೂಗೋಳದ ಮೇಲಿನ ದೊಡ್ಡ ಪ್ರಾಣಿಗಳೆಲ್ಲ ನಾಶವಾಗುತ್ತವೆ.'

'ಮನುಷ್ಯನೂ ಕೂಡ?'

'ಇಲ್ಲವೆ ಮತ್ತೆ? ಜೀವಿಗಳು ಪ್ರಾಣ ದಕ್ಕಿಸಿಕೊಳ್ಳಲು ಸ್ವಲ್ಪ ಕಾವು ಬೇಕು. ಆ ಕಾವು ಕಡಿಮೆಯಾದರೆ ಯಾವ ಜೀವಿತಾನೆ ಬದುಕೀತು?'

ಕೆಲವು ಸೂಕ್ಷ್ಮ ಜೀವಿಗಳು ಸ್ವಲ್ಪ ಕಾಲ ಕಡಲಲ್ಲಿ ಬದುಕಿಯಾವು. ಆದರೆ ಕ್ರಮೇಣ ಕಡಲು ಹೆಪ್ಪುಕಟ್ಟುತ್ತದೆ. ಅಲ್ಲಿಗೆ ಮುಗಿಯಿತೆ? ಭೂಗೋಳದ ಸುತ್ತಲೂ ಇರುವ ಗಾಳಿಯ ಪರೆಯಲ್ಲಿ ವಾಯು ಪದಾರ್ಥಗಳೂ ಕೂಡ ಆರಿ ತಣ್ಣಗಾಗಿ, ದ್ರವಪದಾರ್ಥಗಳಾಗಿ, ಕೊನೆಗೆ ಗಡ್ಡೆ ಕಟ್ಟುತ್ತವೆ.'

'ಸ್ವಾಮಿ, ಬೆಳಕು ಇರೋದಿಲ್ಲವಲ್ಲವೆ? ಈ ಚಂದ್ರ ಕಾಣಿಸೋದಿಲ್ಲ ಅಲ್ಲವೆ.'

'ಇದೇನು ತಾತ? ಮತ್ತೆ ಓನಾಮ. ಅದಕ್ಕೆ ಮೊದಲೇ ಚಂದ್ರ ತುಂಡು ತುಂಡಾಗನೆ? ಕೆಲವು ಕಾಲ ನಿತ್ಯ ಬೆಳುದಿಂಗಳು ಕೊಟ್ಟು ಕಡೆಗೆ ಮಾಯವಾಗುತ್ತಾನೆ. ಸೂರ್ಯನ ಕಾಂತಿ ಕುಗ್ಗಿ ಭೂಮಿ ಮೊದಲಾದ

ದೊಡ್ಡ ಗ್ರಹಗಳೇ ಹೀನಸ್ಥಿತಿಗೆ ಬಂದಾಗ, ನಿನ್ನ ಚಂದ್ರ ಉಳಿಯುತ್ತಾನೆಯೆ ? '

ಆ ಮುದುಕನ ವಿಷಯ ಜಿಜ್ಞಾಸೆಗೂ ಈ ಹುಡುಗನ ತಾಳ್ಮೆಗೇಡಿತನಕ್ಕೂ ಎಷ್ಟು ಭೇದ! ಇಷ್ಟು ತಾಳ್ಮೆಯಿಲ್ಲವಲ್ಲ ಈ ಹುಡುಗರಿಗೆ ? ಆ ದೊಡ್ಡ ಮನುಷ್ಯನ ವಯಸ್ಸು, ಆತನಿಗೆ ವಿದ್ಯಾರ್ಜನೆಗೆ ಬಂದ ಅವಕಾಶ ಲೋಪ—ಈ ಆಲೋಚನೆಯೇ ಇಲ್ಲವಲ್ಲ. ನಾಳೆ ಈ ತರದ ಹುಡುಗರು ದೊಡ್ಡವರಾದರೆ ನಿರಕ್ಷರರಾದವರಿಗೆ ಏನು ತಾನೆ ಬೋಧಿಸಿಯಾರು ?.... ಸುಬ್ಬನ ಧೋರಣವನ್ನು ತಗ್ಗಿಸುತ್ತ ಪ್ರಾರಂಭಮಾಡಿದೆ.

' ನಿಜ. ಭೂಮಿಯ ಮೇಲ್ಪದರದಲ್ಲಿ ಪ್ರಾಣಿಗಳಿಗೆ ಬೇಕಾದ ಕಾವಿನ ಪ್ರಮಾಣ ಕಡಮೆಯಾಗುವುದರಿಂದ ಪ್ರಾಣಿಕೋಟಿ ನಾಶವಾಗುತ್ತದೆ; ನಿಜ. ಆದರೆ ಭೂಮಿಯ ಒಳಗಡೆ ಪ್ರಚಂಡವಾದ ಉಷ್ಣವಿದೆ. ಭೂಗೋಳದ ಮೇಲಿನ ಸಮುದ್ರಗಳೂ ವಾಯುಪದಾರ್ಥಗಳೂ ಹೀಗೆ ಹೆಪ್ಪುಗಟ್ಟಿದಮೇಲೆಯೂ ಈ ಒಳಗಣ ಬೆಂಕಿ ಆರದು. ಕೆಲವು ನೂರು ವರ್ಷ ಹೀಗೆ ಇರುತ್ತದೆ.

ಭೂಮಿಯೇ ಅಲ್ಲ, ಸೂರ್ಯನಲ್ಲೂ ಹೀಗೇ. ಒಳಗಡೆ ವಿಪರೀತ ಉಷ್ಣ ಇನ್ನೂ ಇರುತ್ತದೆ. ಆ ಸ್ಥಿತಿಯಲ್ಲಿ ಸೂರ್ಯ ದೊಡ್ಡದೊಂದು ಬೂದಿ ಮುಚ್ಚಿದ ಕುಲಿಮೆ. ಭೂಮಿಯಲ್ಲಿ ಅಂಥದೇ, ಅದಕ್ಕಿಂತ ಚಿಕ್ಕದು, ಮತ್ತೊಂದು ಕುಲಿಮೆ.

ಅದು ಪ್ರಳಯ ರಾತ್ರಿ. ದೂರದಲ್ಲಿ ಮಿಣುಕ್ ಮಿಣುಕ್ ಎಂಬ ಚಿಕ್ಕೆಗಳ ಬೆಳಕಲ್ಲದೆ ಮತ್ತೇನೂ ಇಲ್ಲ. ಸೂರ್ಯಪಟ್ಟಣದ ಕೊನೆಯ ದಿನಗಳು ಅವು. ರೋಗಗ್ರಸ್ತನಾದ ಅರಸನ ಸುತ್ತ, ರಾಜಪೋಷಣೆಯಿಲ್ಲದೆ ಬಡವಾದ ಅರಮನೆಯವರು, ಉಪ್ಪುಂಡ ವಿಶ್ವಾಸಕ್ಕೋಸ್ಕರ ಆತನ ಮರಣ ಶಯ್ಯೆಯ ಸುತ್ತ ಬಿಡಲಾರದೆ ತಿರುಗುತ್ತಿರುವ ಕಾಲ ಅದು!

ಸೂರ್ಯನ ಸುತ್ತಲೂ ಗ್ರಹಗಳು ಇನ್ನೂ ತಿರುಗುತ್ತಿವೆ. ಆದರೆ ಈಗಿನಕಿಂತ ಬಹಳ ದೂರವಾಗಿರುತ್ತವೆ. ಅದೇ ವಿಚಿತ್ರ. ಈಗಾಗಲೇ ನಮ್ಮ ಭೂಗ್ರಹ ಸೂರ್ಯನಿಗೆ ದೂರವಾಗಿ ಹೋಗುತ್ತಿದೆ ಅನ್ನುತ್ತಾರೆ.

ಈ ಕತ್ತಲೆ ಗೋಳಗಳು ಹಾಗೆ ತಿರುಗುತ್ತಿರುವಾಗ ಒಂದು ವಿಚಿತ್ರ

ಸಂಗತಿ ನಡೆದರೂ ನಡೆದೀತು. ಇವುಗಳಲ್ಲಿ ಯಾವುದೇ ಒಂದು, ಸೂರ್ಯನೇ ಅನ್ನೋಣ, ಮತ್ತೊಂದು ಕತ್ತಲೆ ಗೋಳಕ್ಕೆ ಢಿಕ್ಕೀ ಹೊಡೆದೀತು. ಬೆಂಕಿಯ ಕಿಡಿಗಾಗಿ ಚಕಮಕಿ ಕಲ್ಲನ್ನು ಹೊಡೆದಂತೆ ಪಕ್ಕದಿಂದ ಢೀಯಾದೀತು. ಎರಡು ಮಹಾಶಕ್ತಿಗಳ ಸಂಘರ್ಷಣ ಅದು. ಆ ಢಿಕ್ಕಿಗೆ ಈ ಎರಡು ಕತ್ತಲು ಗೋಳಗಳಲ್ಲೂ ಇರುವ ಕಾವು ಒಂದೇ ಹೊಡೆತಕ್ಕೆ ವಿಜೃಂಭಿಸಿ ಹೊರಹೊಮ್ಮುತ್ತದೆ.

ಮೂಲ ಪದಾರ್ಥಗಳು ೯೨ ಎಂದು ಹೇಳಿದ್ದೆ. ಇವುಗಳಲ್ಲಿ ಎರಡು ಅತಿ ಮುಖ್ಯವಾದವು. ಇವೇ ಉಳಿದವಕ್ಕೆಲ್ಲ ಪೀಠಿಕೆ ಎಂದರೂ ಸರಿ. ಈ ಗೋಳಗಳಲ್ಲಿ ತುಂಬಿರುವ ಆ ಪದಾರ್ಥಗಳೆಲ್ಲವೂ ಖಗೋಳ ಲೋಕದಲ್ಲಿ ನಡೆದ ಈ ಢಿಕ್ಕಿಯಿಂದ ಒಂದೇ ಬಾರಿಗೆ ಚೂರು ಚೂರಾಗಿ ಸಿಡಿದು, ಈ ಎರಡು ಪದಾರ್ಥಗಳ ಗುಂಪಾಗಿ ಏರ್ಪಡುತ್ತದೆ. ಆ ಗೋಳಗಳ ಸಂಘರ್ಷಣಕ್ಕೆ ಒಂದೊಂದು ಗೋಳದೊಳಗಿಂದ ಈ ಪದಾರ್ಥಗಳು ಅಲೆಯಲೆಯಾಗಿ ಮೇಲಕ್ಕೆ ಹೊಮ್ಮುತ್ತವೆ ಅನ್ನುತ್ತಾರೆ ಶಾಸ್ತ್ರಜ್ಞರು. ಈ ಎರಡು ಅಲೆಗಳೂ ಒಂದರ ಸುತ್ತ ಒಂದು ಗಿರಗಿರ ಎರಡು ಹಾವಿನ ಹಾಗೆ ತಿರುಗುತ್ತವೆ.

ಕ್ರಮೇಣ ಹಾವಿನ ಸಿಂಬಿಯ ಆಕಾರದ ಕಾಂತಿಮೇಘ ಒಂದು ರೂಪುಗೊಳ್ಳುತ್ತದೆ. ಆ ಕಾಂತಿಮೇಘದಲ್ಲಿ ಅಲ್ಲಲ್ಲಿ ನಕ್ಷತ್ರಗಳು ಹುಟ್ಟುತ್ತವೆ. ಅವುಗಳಲ್ಲಿ ಒಂದು ಸೂರ್ಯನಾಗಬಹುದು. ಮತ್ತೊಂದು ಪಟ್ಟಣಕ್ಕೆ ಆತ ಪಟ್ಟ ಕಟ್ಟಿಕೊಂಡಾನು. ಮತ್ತೆ ಸೃಷ್ಟಿ ಪ್ರಾರಂಭ!'

'ದೇವರು, ಈ ಚಿಕ್ಕೆಗಳೋ ಮತ್ತೆ ?'

'ತಾತ, ನಮ್ಮ ಸೂರ್ಯನೂ ಒಂದು ಚಿಕ್ಕೆಯೇ ಅಲ್ಲವೆ ? ಪ್ರತಿ ನಕ್ಷತ್ರಕ್ಕೂ................'

'ಹಾಗಾದರೆ ಆ ಚಿಕ್ಕೆಗಳ ಸುತ್ತಲೂ ಹೀಗೆ ಇನ್ನೇನಾದರೂ ನಮಗೆ ತಿಳಿಯದ ಪ್ರಾಣಿಗಳು ಇವೆಯೇ ಏನೊ!'

'ಇದ್ದರೂ ಇರಬಹುದು. ನಮಗೆ ತಿಳಿದ ಮಟ್ಟಿಗೆ ಅವು ಕಣ್ಣಿಗೆ ಕಾಣಿಸುವಂತೆ ಮಾಡುವ ಸಾಧನೆ ಇಲ್ಲಿಯತನಕ ಸಿದ್ಧವಾಗಿಲ್ಲ. ತಿಳಿದವರು ಈ ವಿಷಯದಲ್ಲಿ ಹೀಗೇ ಎಂದು ಏನೂ ಹೇಳಲಾರದೆ ಇದಾರೆ. ನಮ್ಮ

ಭೂಗೋಳದಿಂದ ಖಗೋಳಕ್ಕೆ ಪ್ರಯಾಣ ಮಾಡುವ ಪ್ರಯತ್ನ ನಡೆಯುತ್ತಲೇ ಇದೆ. ಎಂದೋ ಒಂದು ದಿನ ಅದನ್ನು ಸಾಧಿಸುತ್ತೇವೆ ಎಂದು ಶಾಸ್ತ್ರಜ್ಞರ ನಂಬಿಗೆ. ಮೊದಲು ಭೂಮಿಗೆ ಹತ್ತಿರ ಇರುವ ಚಂದ್ರಗೋಳವನ್ನು ಸೇರಬೇಕೆಂದು ಆಲೋಚಿಸುತ್ತಿದಾರೆ.'

'ಹೌದು ನಮ್ಮ ಹಿರಿಯರು ಆಕಾಶಗಮನದಿಂದ ಎಲ್ಲಾ ಲೋಕಗಳನ್ನೂ ತಿರುಗಿಬರುತ್ತಿದ್ದರಂತೆ....ಏನೋ ಇವೆಲ್ಲ! ಈ ರೈಲು, ವಿಮಾನ, ಈ ಇಂದ್ರಜಾಲವೆಲ್ಲಾ ನೋಡಲಿಕ್ಕೆ ಸೊಗಸಾಗೇ ಇದೆ. ಆದರೆ ಕೊನೆಗೆ ಈ ಸೂರ್ಯ, ಈ ಗ್ರಹಗಳು ಎಲ್ಲವೂ ನಾಶವಾಗುತ್ತದೆ ಎಂತ ತಿಳಿದೂ ತಿಳಿದೂ ಇದಕ್ಕೆಲ್ಲಾ ಹೊಡೆದಾಡೋದು ಏಕೆ? ಈ ಯಂತ್ರ ತಂತ್ರ ಕಂಡು ಹಿಡಿದು ಏನುಬಂತು?'

ಇವೊತ್ತಿನ ಶಾಸ್ತ್ರಜ್ಞರು, ಈ ದೇಶದಲ್ಲಿನ ಜ್ಞಾನಿಗಳು ಅದಕ್ಕೇನು ಉತ್ತರ ಕೊಡುತ್ತಾರೆ? ವೇದಾಂತ ಮಾರ್ಗವಲ್ಲದೆ ಬೇರುಂಟೆ? ಯಾವುದೂ ಶಾಶ್ವತವಲ್ಲದಾಗ ಬಯಕೆಗಳನ್ನು ಬೆಳೆಸಿ ಏನು ಲಾಭ? ಸರ್ವಸಂಗ ಪರಿತ್ಯಾಗ, ಸನ್ಯಾಸ, ದೈವಚಿಂತನಗಳಲ್ಲಿ ಇನ್ನೇನಾದರೂ ತಿಳಿಯುತ್ತದೆಯೋ ಏನೋ! ನಿಜವೇ. ಆದರೆ ಪರತಂತ್ರ ಭಾರತದೇಶ. ದೇಶವೇ ಬೇಡ ಎಂಬವರಿಗೆ, ಅಷ್ಟು ವಿಜ್ಞಾನವಿದ್ದವರಿಗೆ ಅದೇ ದಾರಿ; ಸರಿಯೆ. ಆದರೆ ಪ್ರಪಂಚ ಸುಖ ಬಯಸಿ, ಸಮಾಜದ ಏಳಿಗೆ ರಾಷ್ಟ್ರದ ಉನ್ನತಿ ಕೋರುವವರಿಗೆ ಅದು ದಾರಿಯಲ್ಲ. ನನ್ನೊಳಗೇ ನಾನು ಹೀಗೆ ಕಡೆಯುತ್ತ ಬದಲು ಹೇಳಿದೆ.

'ತಾತ, ನೀನು ಹೇಳುವುದು ನಿಜ. ಆದರೆ ಎಲ್ಲರಿಗೂ ವೇದಾಂತ ಮಾರ್ಗ ಸಾಧ್ಯವಿಲ್ಲ. ಲೋಕದಲ್ಲಿ ಮುಕ್ಕಾಲು ಪಾಲು ಜನ ಇಹಸುಖವನ್ನು ಬಿಡಲಾರರು. ಉಡಲು ಬಟ್ಟೆ, ತಿನಲು ಕೂಳು, ಇರಲು ಮನೆ, ಇಷ್ಟರಲ್ಲಿ ತೃಪ್ತಿಹೊಂದರು. ಬದುಕುವಾಗ ಆರೋಗ್ಯವಾಗಿ ಬಲವಾಗಿ ಸುಖವಾಗಿ ಬದುಕಬೇಕಲ್ಲವೆ.

ನಮ್ಮ ಹಿರಿಯರು ಇದನ್ನು ಅರಿತಿದ್ದರು. ಹಿರಿಯರು ಎಂದರೆ ಕೋಟಿಗಟ್ಟಲೆ ವರ್ಷದ ಹಿಂದಿನವರು; ವೇದಗಳ ಕಾಲದ ಋಷಿಗಳು. ಇದನ್ನು ತಿಳಿದೇ ಮನುಷ್ಯನಿಗೆ ಆಶ್ರಮ ಧರ್ಮಗಳೆಂದು ವಿಧಿಸಿದರು.

ಮೊದಲು ವಿಜ್ಞಾನ ಗಳಿಸು ಎಂದರು. ಆಮೇಲೆ ಸಮಾಜಕ್ಕೆ ದೂರವಾಗಿ ಅರಣ್ಯದಲ್ಲಿ ದೈವಚಿಂತನೆ ಮಾಡು. ನಿನ್ನ ಹೆಂಡತಿಯೊಬ್ಬಳೇ ಜೊತೆಗೆ. ಆಗ ನಿನ್ನ ಇಂದ್ರಿಯಗಳು ನಿನ್ನ ಸ್ವಾಧೀನಕ್ಕೆ ಬರಬೇಕು. ತರುವಾಯ ಎಲ್ಲಾ ಬಿಟ್ಟು ಸನ್ಯಾಸಿಯಾಗಿ ದೇಹವನ್ನು ಸಾಕುಮಾಡು. ಹೀಗೆ ಮನುಷ್ಯ ಕ್ರಮಕ್ರಮವಾಗಿ ಮೆಟ್ಟಲು ಮೆಟ್ಟಲಾಗಿ ವೈರಾಗ್ಯದ ದಾರಿ ಏರಬೇಕು ಎಂದರು.

ಅಂದರೆ ಪ್ರಾಚೀನಾರ್ಯರು ಮಾನವನ ಶಕ್ತಿಯನ್ನು ಪೂರ್ಣವಾಗಿ ಗ್ರಹಿಸಿ ಈ ದಾರಿ ನಿರ್ಣಯಿಸಿದರು. ಶರೀರಮಾದ್ಯಂ ಖಲು ಧರ್ಮ ಸಾಧನಂ ಎಂದರು. ಯಾವ ಧರ್ಮ ಸಾಧಿಸಲಿಕ್ಕೂ ದೇಹ ಮುಖ್ಯ ಎಂದರು. ಶರೀರ ಪೋಷಣೆಗೆ ತಕ್ಕ ಶಾಸ್ತ್ರಗಳನ್ನು ಮಾಡಿದರು.

ಕಾಲ ಕಳೆದಂತೆ ಎಲ್ಲಾ ತಲೆಕೆಳಗಾಯಿತು. ಈಗಿನ ಈ ಬಿಳೀ ಜಾತಿಗಳು ಅಡವಿಯಲ್ಲಿ ಅನಾಗರಿಕವಾಗಿ ತಿರುಗುತ್ತಿದ್ದಾಗ ನಮ್ಮ ದೇಶ ದಲ್ಲಿ ಮಹಾ ಸಾಮ್ರಾಜ್ಯಗಳು ವಿಸ್ತರಿಸಿದವು. ಮಹಾ ನಗರಗಳು ಬೆಳಗಿದವು. ಸರ್ವತೋಮುಖವಾಗಿ ನಾಗರಿಕತೆ ಈ ಭರತಖಂಡದಲ್ಲಿ ನಾಲ್ಕೂ ದಿಕ್ಕಿನಲ್ಲೂ ಮೆರೆಯಿತು. ಈ ದೇಶದಲ್ಲಿ ಬೆಳಗಿದ ಆಹಾರ ಶಾಸ್ತ್ರ ಕ್ಕಿಂತ ಇಂದಿನ ಶಾಸ್ತ್ರಜ್ಞರು ಹೆಚ್ಚು ಏನೂ ಹೇಳಿಲ್ಲ; ಹೇಳುವಂಥದು ಇಲ್ಲ. ಇಲ್ಲಿ ಅದ್ಭುತವಾದ ಶಸ್ತ್ರಚಿಕಿತ್ಸೆ ಸಾಗಿತ್ತು. ನೂರಾರು ವರ್ಷ ಗಳ ಹಿಂದೆ ನಿಲ್ಲಿಸಿದ ಕಬ್ಬಿಣದ ಕಂಬಗಳು ಮಳೆಗೆ ನೆನೆದು, ಬಿಸಿಲಿಗೆ ಒಣಗಿ ತುಕ್ಕು ಹಿಡಿಯದೆ ಇವೆ. ಆ ಲೋಹಗಳಲ್ಲಿ ಏನು ಕಲೆಸಿದಾರೋ ಇಂದಿಗೂ ಯಾರಿಗೂ ತಿಳಿಯದು.

ಅಷ್ಟೆಲ್ಲ ಅನುಭವಿಸಿ ಕಡೆಗೆ ಈ ಜಾತಿ ವೈರಾಗ್ಯಕ್ಕೆ ಇಳಿಯಿತು. ಪರದೇಶಗಳಿಗೆ ಮಣಿದುಹೋಯಿತು. ನೀರಸವಾಯಿತು. ಮೊದಮೊದಲು ಶತ್ರುವನ್ನು ಗೆಲ್ಲುವುದೇ ಧರ್ಮ. ಆಮೇಲೆ ಕೊಲ್ಲಬೇಕಾದಂಥ ಶತ್ರು ಕೈಗೆ ಸಿಕ್ಕರೂ ಬಿಟ್ಟುಕೊಟ್ಟರು ಈ ದೇಶದವರು. ಈಪೊತ್ತು—ಶತ್ರುವನ್ನೇ ಮಿತ್ರನನ್ನಾಗಿ ಮಾಡಿಕೊಳ್ಳಬೇಕು. ದ್ವೇಷ ಕೂಡದು. ಅಹಿಂಸೆ ಶಾಂತಿ ಎಂಬ ಮಹಾತ್ಮ ಈ ಭರತಖಂಡದಲ್ಲಿ ಅವತರಿಸಿದ.

ಲೋಕದಲ್ಲಿ ಭಾರತ ಜಾತಿ ಉಳಿಯಲು ಮತ್ತೆ ನಮ್ಮ ನಾಗರಿಕತೆ

ಬೆಳೆಯಬೇಕು. ಅದಕ್ಕೆ ಶಾಸ್ತ್ರಜ್ಞಾನ ಅಗತ್ಯ ; ಇವೊತ್ತಿನ ಶಾಸ್ತ್ರಜ್ಞಾನ-ಯಾವ ವಿಜ್ಞಾನದಿಂದ ಈ ವಿಜಾತೀಯರು ಈ ಜಾತಿಯನ್ನು ಅದುಮಿ ದಾರೋ ಆ ಜ್ಞಾನ ಬೇಕು. ದೇವತೆಗಳು ಕೂಡ ತಮ್ಮ ಹಗೆಗಳಾದ ರಾಕ್ಷಸರನ್ನು ಗೆಲ್ಲಲ್ಲು ಮೃತಸಂಜೀವನೀ ವಿದ್ಯೆಗಾಗಿ ಕಚನನ್ನು ಹಗೆಗಳ ಗುಂಪಿಗೆ ಕಳಿಸಿದರು. ನಾವು ಶಾಸ್ತ್ರವಿಷಯಗಳನ್ನು ತಿಳಿದುಕೊಳ್ಳದೆ ಗತ್ಯಂತರವಿಲ್ಲ.'

'ಸ್ವಾಮಿ, ನಾವೂ ಈ ಶಾಸ್ತ್ರಕ್ಕ್ಯೋಸ್ಕರ ಮತ್ತೆ ಕೈಚಾಚಿದರೆ, ಇವರ ಹಾಗೇ ನಾವೂ ಮತ್ತೆ ಒಬ್ಬರನ್ನೊಬ್ಬರು ಕಡಿಯೋದಲ್ಲದೆ ಮತ್ತೇನು ಲಾಭ ? ಇವರು ಮಾಡ್ತಾ ಇರೋದು ಅದೇ ತಾನೆ. ಏನು ಬಾಂಬು ! ಏನು ವಿಮಾನ ! ಇದೆಲ್ಲಕ್ಕೂ ಈ ಶಾಸ್ತ್ರವೇ ಅಲ್ಲವೆ ಕಾರಣ ?'

'ತಾತಾ, ಯಾವ ವಿದ್ಯೆಯೇ ಆಗಲಿ, ಬಳಸುವುದರಲ್ಲಿದೆ : ಒಳ್ಳೇದಾಗಿಯೋ ಕೆಡುಕಾಗಿಯೋ ಅದನ್ನು ತಿರುಗಿಸಬಹುದು ಬಳಸುವುದರಲ್ಲಿ. ಹುಟ್ಟಾ ಒಳ್ಳೇ ಸಂಸ್ಕಾರವಿರುವ ಮನೆತನದ ಮಕ್ಕಳು ಸಂಗತಿಯನ್ನು ಚಕ ಚಕ ತಿಳಿದುಕೊಳ್ಳುತ್ತಾರೆ. ವ್ಯವಹಾರದಲ್ಲಿ ಭಾರೀ ಬುದ್ಧಿಯಿಂದ ನಡೆಯುತ್ತಾರೆ. ಔದಾರ್ಯ ತೋರಿಸುತ್ತಾರೆ. ಅವರ ಸಂಸ್ಕಾರ ಒಳ್ಳೆಯದಾದರೆ ಹೀಗೆ ನಡೆಯುತ್ತಾರೆ. ಇಲ್ಲದವರು, ಅದೇ ವಿದ್ಯೆ ಕಲಿತವರೇ, ಅದಕ್ಕೆ ವ್ಯತಿರೇಕವಾಗಿ ನಡೆಯುತ್ತಾರೆ.

ವಿದ್ಯೆ ಈ ಸಂಸ್ಕಾರಕ್ಕೆ ಮೆರುಗು ಕೊಡುತ್ತದೆ.'

'ಹೌದು. ವಿದ್ಯೆ ಇಲ್ಲದವರು ಪಶು ಎಂತ ಕವಿ ಹೇಳಿದಾನೆ.'

'ನಿಜ. ಆದ್ದರಿಂದ ವಿದ್ಯೆಯ ಉಪಯೋಗ ಅದನ್ನು ಪಡೆದವರ ಸಂಸ್ಕಾರಕ್ಕೆ ಅನುಗುಣವಾಗಿ. ನಮ್ಮ ಜಾತಿ ಬಹಳ ಪುರಾತನ ಜಾತಿಗಳಲ್ಲೊಂದು. ಎಲ್ಲ ವಿಷಯಗಳನ್ನೂ ಸಮಗ್ರವಾಗಿ ಅರಿತ ಜಾತಿ. ಕಾಲಚಕ್ರದ ವಿಪರೀತಗಮನದಿಂದ ಶರೀರ ವಿಷಯದಲ್ಲಿ ಪೂರ್ತಿಯಾಗಿ ಅಸಡ್ಡೆ ತೋರಿ, ನೀರಸವಾಗಿಹೋಯಿತು. ಇಂಥ ಈ ಜಾತಿ ಮತ್ತೆ ವಿಜ್ಞಾನಗಳಿಸಿ, ಇತರ ಜಾತಿಗಳಿಗೆ ಕಡಮೆಯಾಗದಂತೆ ಈಗಿನ ವಿಜ್ಞಾನವನ್ನು ಗಳಿಸಿ, ತನ್ನ ಉತ್ತಮ ಸಂಸ್ಕಾರದಿಂದ ಅದನ್ನು ಸದ್ವಿನಿಯೋಗ ಮಾಡಬಹುದು.

ಪಾಶ್ಚಾತ್ಯರ ಕೈಯಲ್ಲಿ ಕೋತಿಯ ಕೈಗೆ ಕೊಟ್ಟ ಮುತ್ತಿನ ಹಾರದಂತೆ ಇದೆ ಆಧುನಿಕಶಾಸ್ತ್ರ.'

'ಈ ಶಾಸ್ತ್ರಜ್ಞಾನ ಬಂದರೆ ನಾವು ಮಾತ್ರ ಇತರ ದೇಶಗಳ ಮೇಲೆ ದಂಡಯಾತ್ರೆ ಹೊರಡದೆ ಇರುತ್ತೇವೆಯೆ, ಮೇಷ್ಟ್ರೆ?'

'ಸುಬ್ಬ, ನಮ್ಮ ದೇಶ ಸುಭಿಕ್ಷದೇಶ. ಸಾಕಾದಷ್ಟು ಸಹಜ ಸಂಪತ್ತಿ ಇದೆ. ಲೋಕದಲ್ಲಿ ಸಹಜಸಂಪತ್ತು ಕಡಮೆಯಿರುವ ದೇಶಗಳು ಈ ದೇಶ ವನ್ನು ಬಯಸುತ್ತಿವೆ. ಇಂಥ ಈ ದೇಶ ಶಾಸ್ತ್ರಜ್ಞಾನವನ್ನು ಉಪಯೋಗಿಸಿ ಈ ಸಂಪತ್ತನ್ನೆಲ್ಲಾ ಭಾರತಜನಕೋಟಿಗಾಗಿ ಬಳಸಬಹುದು. ಇತರ ದೇಶಗಳ ಮೇಲೆ ಬೀಳುವ ಅಗತ್ಯ ನಮಗಿಲ್ಲ. ನಮ್ಮ ದೇಶದ ಮೇಲೆ ಇತರರು ಬೀಳದಂತೆ ಮಾಡಿಕೊಳ್ಳುವುದೇ ನಮ್ಮ ವಿಧಿ. ಅದಕ್ಕೆ ಅರ್ಥ ಬಲವೂ ಅಸ್ತ್ರಬಲವೂ ಬೇಕು. ಅರ್ಥವೃದ್ಧಿಯಾಗಬೇಕೆಂದರೆ ದೇಶದ ಪ್ರಕೃತಿಸಂಪತ್ತನ್ನು ಶಾಸ್ತ್ರಜ್ಞಾನದಿಂದ ಬೆಳೆಸಬೇಕು. ಇದು ಅಗತ್ಯ. ಈ ಜಾತಿಯಲ್ಲಿ ದಯಾದಾಕ್ಷಿಣ್ಯ ಸಹನೆ ಇವೆ. ಚೀನಾ, ಭಾರತ ದೇಶಗಳಲ್ಲಿ ಶಾಸ್ತ್ರಜ್ಞಾನ ಕಲ್ಪವೃಕ್ಷದಂತೆ ಮಾನವಕಲ್ಯಾಣಕ್ಕೆ ಅನುಕೂಲ ವಾಗುತ್ತದೆ.'

ಸ್ವಲ್ಪ ಹೊತ್ತು ನಿಶ್ಶಬ್ದ.

'ನೀವು ಹೇಳೋದು ನೋಡಿದರೆ, ನಾವು ಈ ಶಾಸ್ತ್ರಗಳನ್ನ ಕಲಿಯದೇ ಹೋದರೆ ಈ ಜಾತಿ ಹಾಳಾಗುತ್ತದೆ ಅಂತೀರಿ.'

'ಇಲ್ಲವೆ ಮತ್ತೆ? ಅಜ್ಞಾನ ಬಹಳ ಬೆಳೆದಿದೆ. ಅನ್ನ ಪುಷ್ಟಿಕರ ವಾಗಿಲ್ಲ. ಸಾಕಷ್ಟು ಸಿಗುವುದೂ ಇಲ್ಲ. ಈ ದೇಶದಲ್ಲಿ ಬದುಕು ಸರಾ ಸರಿ ೩೦ಕ್ಕೆ ಮೀರದಂತೆ ಇದೆಯಲ್ಲ. ಶಿಶುಮರಣ ಘೋರವಾಗಿದೆ. ಆದರೂ ಜನಸಂಖ್ಯೆ ಬೆಳೆಯುತ್ತಿದೆ. ಹುಟ್ಟಿದವರಿಗೆ ಸರಿಯಾದ ಅನ್ನವಿಲ್ಲ. ಆಹಾರಜ್ಞಾನ ಹಾಳಾಗಿದೆ. ಶಿಶುಪೋಷಣೆ ಇಲ್ಲವೇ ಇಲ್ಲ. ಭೂಮಿಯ ಸಾರ ತಗ್ಗಿಹೋಯಿತು. ಈಗಿನ ಶಾಸ್ತ್ರವನ್ನು ಉಪಯೋಗಿಸಿ ಅಮೆರಿಕಾ ರಷ್ಯಾ ದೇಶಗಳು ಕಣ್ಣು ಕುಕ್ಕುವ ಹಾಗೆ ತಯಾರಾಗಿವೆ. ಸಹಜಸಂಪತ್ತಿನಲ್ಲಿ ಭರತಖಂಡ ಅವಕ್ಕೆ ಕಡಮೆಯಿಲ್ಲ. ಈ ಸಂಪತ್ತನ್ನು ಜಾತೀಯ ಸೌಭಾಗ್ಯಕ್ಕೋಸ್ಕರ ವಿನಿಯೋಗಿಸುವ ಶಾಸ್ತ್ರಪರಿಜ್ಞಾನ ಕಡಮೆಯಾಗಿದೆ.

ಆದ್ದರಿಂದಲೇ ನಮಗೆ ಶಾಸ್ತ್ರಜ್ಞಾನ ಅತ್ಯಗತ್ಯ.'

'ಮೇಷ್ಟ್ರೆ, ನಮ್ಮ ದೇಶದಲ್ಲೂ ಶಾಸ್ತ್ರಜ್ಞಾನ ಇರಲಿಲ್ಲವೆ ಹಿಂದೆ?'

'ಅದನ್ನೂ ಬಳಸಬೇಕು. ಆ ಹಳೆಯ ಶಾಸ್ತ್ರಗಳ ಸತ್ಯಾಸತ್ಯವನ್ನು ಆಧುನಿಕ ದೃಷ್ಟಿಯಿಂದ ಪರಿಶೀಲಿಸಬೇಕು. ಉಪಯೋಗಕರವಾದ್ದನ್ನೆಲ್ಲಾ ಬಳಸಬೇಕು. ಹಳೆ ಹೊಸದರ ಸಮನ್ವಯದಿಂದಲೇ ಈ ಜಾತಿಗೆ ಮೋಕ್ಷ.'

'ವಿಷಯ ತಿಳಿದೋರು ನಮ್ಮಂಥಾವರಿಗೆ ಹೇಳದಿದ್ದರೆ ಹೇಗೆ ತಿಳಿಯ ಬೇಕು?' ಎಂದ ತಾತ.

'ಹೇಳಲಿಕ್ಕೆ ಬಿಡುವು ಎಲ್ಲಿ ತಾತ. ಅವರವರ ಹೊಟ್ಟೆಗಾಗಿ ದುಡಿ ವುದರಲ್ಲೇ ಮುಗಿಯುತ್ತಾ ಇದೆ.'

ಸುಬ್ಬ ಈ ಕಾಲದ ನಿರುದ್ಯೋಗ ಸಮಸ್ಯೆಯನ್ನು ನೆನೆದ. ನಾನು ಮುಂಬರಿಸಿದೆ.

'ಸುಬ್ಬ, ಯಾವುದಾದರೂ ಒಂದು ಆದರ್ಶವಿಟ್ಟುಕೊಂಡು ಮಾಡ ಬೇಕು. ನೀನು ಹೇಳಿದ್ದನ್ನೂ ಒಪ್ಪಿದೆ. ಈ ನಿರುದ್ಯೋಗ ಸಮಸ್ಯೆ ಇತರ ದೇಶಗಳಲ್ಲೂ ಇದೆ. ಅಮೆರಿಕಾದಲ್ಲಿ ಇಲ್ಲವೆ? ಆದರೆ ಶಾಸ್ತ್ರಜ್ಞಾನ ಗಳಿಸಿದ ಅಲ್ಲಿನ ತರುಣರು ನೌಕರಿಗಾಗಿ ಬಾಯಿಬಿಡರು. ತಮ್ಮ ವಿದ್ಯೆ ಯನ್ನು ಉಪಯೋಗಿಸಿ ಹೊಟ್ಟೆಹೊರೆದುಕೊಳ್ಳುತ್ತಾರೆ. ವ್ಯವಸಾಯ ಶಾಸ್ತ್ರ ಬಲ್ಲವರಿಗೆ ನಿರುದ್ಯೋಗವೇನು ಬಂತು. ಪಶುವೈದ್ಯದಲ್ಲಿ ಪ್ರವೀಣ ರಾದವರಿಗೆ ಜೀವನ ನಡೆಯಲಾರದೆ? ರೈತರು ಇವರ ಸಹಾಯವನ್ನು ತಿರಸ್ಕರಿಸಿಯಾರೆ? ವೈದ್ಯರು ಬೋರ್ಡು ತಗಲಿಸಿ ಸುಮ್ಮನೆ ಕೂತಿರುವುದು ಯಾವ ಗ್ರಹಚಾರ! ವಿದ್ಯಾವಂತರು ತಮ್ಮಲ್ಲಿ ಪ್ರಜೆಗಳಿಗೆ ನಂಬಿಗೆ ಹುಟ್ಟುವಂತೆ ಮಾಡಬೇಕು. ಅವರಿಗೆ ಅರ್ಥವಾಗುವಂತೆ ವಿಷಯಗಳನ್ನು ಬೋಧಿಸಬೇಕು. ಇಂದಿನ ಸಮಸ್ಯೆ—ವಿದ್ಯಾವಂತರಿಗೂ ಅವಿದ್ಯಾವಂತರಿಗೂ ನಡುವೆ ಇರುವ ಕಡಲನ್ನು ಹೂಣುವುದು. ವಿದ್ಯಾವಂತರು ನಿರಕ್ಷರರನ್ನು ಹೀನವಾಗಿ ನೋಡುತ್ತಿದಾರೆ. ಇವರು ಅರ್ಥ ಮಾಡಿಕೊಳ್ಳಬಲ್ಲರೆ, ಇವರಿಗೇಕೆ ಶಾಸ್ತ್ರ ಎಂಬ ನಿರಸನಭಾವ ತೋರುತ್ತಿದಾರೆ. ಕೆಲವರಿಗೆ ಬಯಕೆಯಿದೆ, ಅವಿದ್ಯಾವಂತರಿಗೆ ಬೋಧಿಸೋಣ ಎಂತ. ಅವರು ಶಾಲೆಯ

ಹುಡುಗರಿಗೆ ಪಾಠ ಹೇಳುವಂತೆ ಅವಿದ್ಯಾವಂತರಿಗೆ ಅರ್ಥವಾಗದ ರೀತಿಯಲ್ಲಿ ವಿಷಯವನ್ನು ಹೇಳುತ್ತಾರೆ.

ಈ ದೇಶದಲ್ಲಿ ಅಕ್ಷರ ಬಾರದವರಿಗೂ ವಿಜ್ಞಾನವನ್ನು ಬೋಧಿಸುವ ವಿಧಾನವನ್ನು ಹಿಂದಿನವರು ನಿರ್ಣಯಿಸಿದ್ದರು. ನಮ್ಮ ಹಿರಿಯರು ಸರ್ವ ವಿಷಯಗಳನ್ನೂ ಪುರಾಣಗಳಾಗಿ, ಹರಿಕಥೆಗಳಾಗಿ, ಬೇರೆಬೇರೆ ರೀತಿಯಲ್ಲಿ ಪ್ರಜೆಗಳಿಗೆ ತಿಳಿಸುವ ಪದ್ಧತಿಯನ್ನು ಏರ್ಪಡಿಸಿದರು. ಆ ದಾರಿಬಿಟ್ಟದ್ದು ತಪ್ಪು.'

'ಮೇಷ್ಟ್ರೆ, ರೇಡಿಯೊ ಸಿನಿಮಾ ಬಂದಮೇಲೆ ಅವೆಲ್ಲಾ ಏತಕ್ಕೆ?'

'ಇದೊಂದು ದೊಡ್ಡ ವಾದ. ಆ ಸಿನಿಮಾದಲ್ಲಿ ರೇಡಿಯೋಗಳಲ್ಲಿ ಕೂಡ ವಿದೇಶಗಳಲ್ಲಿ, ಹಿಂದಿನ ಪದ್ಧತಿಗಳನ್ನು ಹೊಸ ಕಾಲದ ಸಲಕರಣೆಗಳಿಂದ ತೋರಿಸುತ್ತಿದಾರೆ. 'ಓಹೋ, ಈ ತೊಗಲು ಬೊಂಬೆ ಆಟ ಈ ದೇಶದ್ದು. ಈ ಯಕ್ಷಗಾನ ನಮ್ಮ ತಾತ ಮುತ್ತಾತಂದಿರ ಕಾಲದಿಂದ ಬಂದದ್ದು–ಸೊಗಸಾದ ವಿದ್ಯೆ; ಇದು ನಮ್ಮ ದೇಶದ್ದು, ನಮ್ಮ ಜನದ್ದು' ಎಂದು ಹೆಮ್ಮೆ ಪಡುವುದರಲ್ಲಿ ಘನತೆಯಿದೆ.'

ಹಿರಿಯರು ಆನಂದಪಡುತ್ತಾರೆ. ನಡುವಯಸ್ಸಿನವರು ತಮ್ಮ ಕಿರಿತನವನ್ನು ಗುರುತಿಸುತ್ತಾರೆ. ಮಕ್ಕಳು ತಮ್ಮ ಜಾತಿಯ ವಿಜ್ಞಾನವನ್ನು ಅರಿಯುತ್ತಾರೆ. ಜನಾಂಗದಲ್ಲಿ ಸರ್ವತೋಮುಖವಾಗಿ ಪರಿವರ್ತನೆಯಾಗುತ್ತದೆ.

ಚಿತ್ರಗಳಿಗೆ ಹಾಡಿಗೆ ಈ ಹಳೆಯ ಪದ್ಧತಿಗಳನ್ನು ಹೊಸ ದಾರಿಯಲ್ಲಿ ಹೊಂದಿಸಿ ಕಟ್ಟಿ, ವಿಷಯಗಳನ್ನು ಜನಕ್ಕೆ ತಿಳಿಸಬೇಕು. ಇದು ವಿದ್ಯಾವಂತರ ಕರ್ತವ್ಯ. ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಯ ಆರೋಗ್ಯವನ್ನೂ ವಿದ್ಯೆಯನ್ನೂ ನೋಡಿಕೊಂಡರೆ ಅದೇ ಸಾವಿರ ವರ ಕೊಟ್ಟಂತೆ. ಇತರ ದೇಶಗಳ ಸಾಮಾನ್ಯ ಜನರ ಜ್ಞಾನಸಂಪತ್ತನ್ನು ನೋಡಿದರೆ ನಾವು ತಲೆಬಾಗಿಸಬೇಕಾಗಿದೆ. ಈಗಲಾದರೂ ಎಚ್ಚರಗೊಳ್ಳಬೇಕು.'

ತಾಲೂಕು ಕಚೇರಿಯಲ್ಲಿ ೧೧ ಗಂಟೆ ಹೊಡೆಯಿತು. ಚಂದ್ರ ನಡು ನೆತ್ತಿಗೆ ಬರುತ್ತಿದಾನೆ.

ತಾತ: 'ನೀವು ಹೇಳಿದ್ದೆಲ್ಲಾ ನಿಜವೇ, ದೇವರು. ಆದರೆ ಇದೆಲ್ಲಾ ನಡಯಬೇಕಲ್ಲ!' ಅನ್ನುತ್ತ ಮೇಲಕ್ಕೆದ್ದ.

ಸುಬ್ಬ ಮಾತಾಡದೆ ಒಳಗೆ ಹೋದ. ನೀವು ಏನು ಅನ್ನುತ್ತೀರೋ?

**ಖಗೋಳ ಪುರಾಣ ಸಮಾಪ್ತ**



ಈಸ್ಟರ್ನ್ ಪ್ರೆಸ್, ಬೆಂಗಳೂರು ಸಿಟಿ—1946

# ಪ್ರಭಾತ ಸಾಹಿತ್ಯ

ಸಂಪಾದಕರು: ಸಿದ್ಧವನಹಳ್ಳಿ ಕೃಷ್ಣಶರ್ಮ

ವರ್ಷಕ್ಕೆ ಆರು ಪುಸ್ತಕ. ಆರು ರೂ. ಚಂದಾ

---

## ಇದುವರೆಗೆ ಪ್ರಕಟವಾದ ಪುಸ್ತಕಗಳು

೧. ಇನ್ನು ಸಾಕು
೨. ಭಾರತ ಸಮಸ್ಯೆ
೩. ಹಿಂದೂ ಕುಟುಂಬ
೪. ಮನೆಗೆ ಬಂದ ಮಹಾಲಕ್ಷ್ಮಿ
೫. ಹೊಟ್ಟೆಗಿಲ್ಲದ್ದೇಕೆ?
೬. ಗುಲಾಬಿ ಹೂ
೭. ಕನ್ನಡ ಸಮಸ್ಯೆ
೮. ಕನ್ನಡದ ಕಿಡಿಗಳು
೯. ಪ್ರೇಮಚೂರ್ಣ
೧೦. ಭಾವತರಂಗ
೧೧. ಬಿಡುಗಡೆಯ ಬೆಲೆ
೧೨–೧೩–೧೪. ಜಗತ್ಕಥಾವಲ್ಲರಿ